# ಶೂದ್ರ



ಬೆಲೆ : ರೂ. 1-75

ರಾಮಚಂದ್ರ ಉಡುಪ—ಸುಚೇತನ ಸ್ವರೂಪ—ಟಿ. ಪಿ. ಅಶೋಕ್—ಕೆ. ವಿ. ತಿರುಮಲೇಶ್—ಚಂದ್ರಶೇಖರ ತಾಳ್ಯ—ಎಸ್. ಮಂಜುನಾಥ್—ವೇಣುಗೋಪಾಲ ಸೊರಬ—ಬಿ. ಆರ್. ವಿಜಯಕುಮಾರ್—ಎಲ್. ಎನ್. ಗೋಪಾಲ ಕೃಷ್ಣ—ಚಿ. ಸು. ಕೃಷ್ಣ ಸೆಟ್ಟಿ



ಚದುರಂಗರಿಗೆ ಒಂದಷ್ಟು ಪ್ರಶ್ನೆ

'ಮುಕ್ತ' ಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಪುಟ: 7 ನವಂಬರ್: 1984 ಸಂಚಿಕೆ. 1

ಸಹಾಯಕ ಸಂಪಾದಕರು: ನಿರ್ಮಲರೆಡ್ಡಿ—ಆನಂದಮೂರ್ತಿ

ಮುಖಪುಟದ ಕಲೆ: ಧನಲಕ್ಷ್ಮಿ

ಶೂದ್ರ ಬರದಿದ್ದರೆ ಪತ್ರಬರೆಯಿರಿ, ಚಂದಾ ಕಳಿಸಿ. ನಿಮಗೆ ತೊಂದರೆಯಾಗದಿದ್ದರೆ ಆಜೀವಸದಸ್ಯರಾಗಿ.

ವಾರ್ಷಿಕ ಚಂದಾ: 20ರೂ.
ಆಜೀವ ಚಂದಾ: 200ರೂ. (ನಾಲ್ಕುಕಂತುಗಳಲ್ಲಿ)

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜು ಅಂಚೆ,
ಬೆಂಗಳೂರು-560 029

ಸೂಚನೆ: ಈ ಸಂಚಿಕೆಯ ಲೇಖಕರಾದ ಚದುರಂಗರ ಮತ್ತು ಟಿ.ಪಿ. ಅಶೋಕ್‌ರವರ ವಿಳಾಸವನ್ನು ಲೇಖನದ ಹತ್ತಿರದ ಬದಲು ಇಲ್ಲಿ ಪ್ರಕಟಿಸುತ್ತಿದ್ದೇವೆ:

ಚದುರಂಗ: 2823, 8ನೇಕ್ರಾಸ್, ವಿ.ವಿ. ಮೊಹಲ್ಲಾ, ಮೈಸೂರು-570 002.

ಟಿ.ಪಿ. ಅಶೋಕ್, ಲಾಲ್‌ಬಹದೂರ್ ಶಾಸ್ತ್ರಿ ಕಾಲೇಜು, ಸಾಗರ, ಶಿವಮೊಗ್ಗ ಜಿಲ್ಲೆ

# 'ಅವಸ್ಥೆ'ಯ ರಾಜಕೀಯ ಹಂದರ

—ಎನ್. ರಾಮಚಂದ್ರ ಉಡುಪ

ಆಧುನಿಕ ಮನುಷ್ಯನ ಅದೃಷ್ಟವನ್ನು ರೂಪಿಸುವ ಶಕ್ತಿಯಾಗಿ, ಅವನ ಕ್ರಿಯಾಶೀಲತೆಗೆ ಪ್ರೇರಕ ಒತ್ತಡಗಳಾಗಿ ಇಂದಿನ ರಾಜಕೀಯವನ್ನು ಗ್ರಹಿಸುವುದು ಒಂದು ರೀತಿ. ಪಕ್ಷ ರಾಜಕಾರಣವನ್ನೇ ರಾಜಕೀಯ ಸಂಸ್ಕೃತಿಯ ಜತೆ ಸಮೀಕರಿಸಿ ತೀರ್ಮಾನಗಳನ್ನು ಕೊಡುವುದು ಇನ್ನೊಂದು ರೀತಿ. ಕನ್ನಡದ ಹೆಚ್ಚಿನ ಬರಹಗಾರರು ನಮ್ಮ ರಾಜಕೀಯ ಅವಸ್ಥೆಯ ಬಗೆಗೆ ಹೊಂದಿದ್ದ ನಿಲುವು ಎರಡನೆಯ ಬಗೆಯದು. ಉದಾಹರಣೆಗೆ ಶಿವರಾಮ ಕಾರಂತರ ಬರಹಗಳನ್ನೇ ಗಮನಿಸಬಹುದು. (ಕಾರಂತರನ್ನೇ ಉದಾಹರಿಸಲು ಕಾರಣ, ಅವರೂ ಕೂಡಾ ಅನಂತಮೂರ್ತಿಯವರಂತೆ ಒಂದು ಬಗೆಯ ಸಾಹಿತ್ಯ-ರಾಜಕೀಯ ವ್ಯಕ್ತಿ ಎಂಬುದು). ನಮ್ಮ ರಾಜಕೀಯ ಸಂಸ್ಕೃತಿಯ ಬಗೆಗೆ ಕಾರಂತರು ತಳೆಯುವ ಧೋರಣೆಗಳು ಪಕ್ಷ ರಾಜಕಾರಣಕ್ಕೆ ಸಿನಿಕತನದ ಪ್ರತಿಕ್ರಿಯೆಯ ರೂಪದಲ್ಲಿವೆ. ಅವರ 'ಗೊಂಡಾರಣ್ಯ', 'ನಾವು ಕಟ್ಟಿದ ಸ್ವರ್ಗ' ಮುಂತಾದ ಕಾದಂಬರಿಗಳು ನಮ್ಮ ರಾಜಕೀಯ ಪರಿಸ್ಥಿತಿಯನ್ನೇ ಮೂಲ ದ್ರವ್ಯವಾಗಿ ಪಡೆದವುಗಳು. ಆದರೆ ಇಲ್ಲೆಲ್ಲ ಅವರ ಮೂಲತಃ ಅನ್ವೇಷಣಾ ಪ್ರವೃತ್ತಿ ಮರೆಯಾಗಿ ವ್ಯಂಗ್ಯ ತಾಂಡವವಾಡುತ್ತದೆ. ಬದುಕಿನ ಇನ್ನಿತರ ವಿಷಯಗಳಿಗೆ ಸಂಬಂಧಿಸಿದಂತೆ ವೈಚಾರಿಕತೆಯನ್ನು ಪ್ರತಿಪಾದಿಸುವ ಕಾರಂತರು, ಹೆಚ್ಚೆಚ್ಚು ಆರ್ಥಿಕ ಸ್ವರೂಪಗಳಲ್ಲಿ ಪ್ರಕಟವಾಗುವ ಆಧುನಿಕ ರಾಜಕೀಯ ಅವಸ್ಥೆಯ ಬಗೆಗೆ ಅಸಹನೆ ಮಾತ್ರ ಬೆಳೆಸಿಕೊಂಡದ್ದಕ್ಕೆ ಕಾರಣ ಏನಿರಬಹುದು ? ಈ ಅಸಹನೆಗೂ, ಸ್ವಾತಂತ್ರ್ಯ ಪೂರ್ವ ಭಾರತದ ಬೌದ್ಧಿಕ ಪರಂಪರೆಯಲ್ಲಿ ಅವರ ವೈಚಾರಿಕತೆಯ ಬೇರುಗಳಿರುವುದಕ್ಕೂ ಏನಾದರೂ ಸಂಬಂಧಗಳಿರಬಹುದೆ ? ಈ ಪ್ರಶ್ನೆ ಕನ್ನಡದ ಇನ್ನಿತರ ಸಾಹಿತಿಗಳಿಗೂ ಸಲ್ಲುವಂತಹದು ಎಂದು ನನ್ನ ಅನಿಸಿಕೆ. ಆದರೆ ಅದರ ಚರ್ಚೆ ಈ ಲೇಖನದ ವ್ಯಾಪ್ತಿಗೆ ಮೀರಿದ್ದಾದುದರಿಂದ ಇಲ್ಲಿ ಅದನ್ನು ವಿಸ್ತರಿಸುವುದಿಲ್ಲ.

---

ರಾಮಚಂದ್ರ ಉಡುಪ, ಇಂಗ್ಲೀಷ್ ಉಪನ್ಯಾಸಕ, ಹೈಸ್ಕೂಲು ರಸ್ತೆ, ವಿಟ್ಲ, ದಕ್ಷಿಣ ಕನ್ನಡ
574243

ಅನಂತ ಮೂರ್ತಿಯವರ ಸೃಜನಶೀಲ ಶೋಧನೆಗೆ ಒಳಪಡುವ ರಾಜಕೀಯ ತೀರ ಭಿನ್ನವಾದುದ್ದು. ಅದು ಆಧುನಿಕ ಮನುಷ್ಯನ ಸರ್ವಸ್ವವನ್ನು ವ್ಯಾಪಿಸುವಷ್ಟು ವಿಶಾಲ ಹರವು ಉಳ್ಳದು ; ಅವನನ್ನು ರೂಪಿಸುವಷ್ಟು ಶಕ್ತಿಯಯುತವಾದುದ್ದು. ಒಂದು ಕಾಲದಲ್ಲಿ ಧರ್ಮಕ್ಕಿದ್ದ ಸರ್ವವ್ಯಾಪ್ತಿತ್ವ ಈ ರಾಜಕೀಯಕ್ಕಿದೆ. ನಮ್ಮ ಸಂಸ್ಕೃತಿಯ ಅಂತಃಸತ್ವ ರಾಜಕೀಯವಾಗಿಯೂ ವ್ಯಕ್ತವಾಗಬೇಕಾದ ಚಾರಿತ್ರಿಕ ಅನಿವಾರ್ಯವನ್ನು ಸಾಹಿತ್ಯಿಕ ಚೌಕಟ್ಟಿನಲ್ಲಿ ಇಟ್ಟು ನೋಡುವ ಪ್ರಯತ್ನ ಮಾಡಿದವರು ಅನಂತ ಮೂರ್ತಿ ಅವರ ಪ್ರಮುಖ ಕಾದಂಬರಿಗಳಾದ "ಭಾರತೀಪುರ" ಮತ್ತು "ಅವಸ್ಥೆ"ಯಲ್ಲಿ ಸಂಸ್ಕೃತಿಗಿರುವ ಈ ಒತ್ತಡಗಳನ್ನು ಸೃಜನಶೀಲವಾಗಿ ಎದುರಿಸುವ ಪ್ರಯತ್ನ ಇದೆ.

'ಅವಸ್ಥೆ' ನಮ್ಮ ರಾಜಕೀಯ ಸಂಸ್ಕೃತಿಯ ಇತಿಮಿತಿಗಳನ್ನು ತಳಮಟ್ಟ ಶೋಧಿಸುವ ಹಂಬಲವುಳ್ಳ ಕೃತಿ. ಕೃಷ್ಣಪ್ಪ ಪ್ರತಿನಿಧಿಸುವ ರಾಜಕೀಯ ಪರಿಸರ ಅತ್ಯಂತ ವೈವಿಧ್ಯಮಯವಾದ ಜೀವನ ಧೋರಣೆಗಳಿಂದ ಶ್ರೀಮಂತಗೊಂಡದ್ದಾಗಿದೆ. ಕಾದಂಬರಿಯ ಕೇಂದ್ರ ಲಕ್ಷ್ಯವನ್ನು ಈ ಪರಿಸರವೇ ನಿಯಂತ್ರಿಸುತ್ತದೆ. ಈ ಪರಿಸರದ ಬೇರೆ ಬೇರೆ ಪದರುಗಳನ್ನು ಅವಲೋಕಿಸುವುದರ ಮೂಲಕ ಕೃಷ್ಣಪ್ಪನ ಹಾಗೂ ಕಾದಂಬರಿಯ ಪ್ರಮುಖ ಸೆಳೆತ (tension) ಗಳ ದರ್ಶನವಾಗಲು ಸಾಧ್ಯವಿದೆ.

ಈ ಕಾದಂಬರಿಯಲ್ಲಿ ಚರ್ಚಿಸಲ್ಪಡುವ ರಾಜಕೀಯ ಹಂದರದಲ್ಲಿ ಮುಖ್ಯವಾಗಿ ಮೂರು ಸ್ತರಗಳನ್ನು ಗುರುತಿಸಬಹುದು. ಒಂದು ಭೈರಾಗಿ, ಮಹೇಶ್ವರಯ್ಯ ಮತ್ತು ಹನುಮನಾಯ್ಕ ಮುಂತಾದವರ ನಿಗೂಢತೆ, ನಿರ್ಲಿಪ್ತತೆ ಮತ್ತು ಅದಮ್ಯ ಜೀವನೋತ್ಸವನ್ನು ಪ್ರತಿನಿಧಿಸುವ ಪ್ರಪಂಚ. ಎರಡು ಬಿಂದು ಸ್ಪಷ್ಟ ಉದ್ದೇಶಕ್ಕಾಗಿ ಜೀವನವನ್ನು ರೂಪಿಸಿಕೊಳ್ಳುವ, ಒಂದು ರೀತಿಯಲ್ಲಿ ಮಿತಿಗೊಳಿಸಿಕೊಳ್ಳುವ ಅಣ್ಣಾಜಿ, ನಾಗರಾಜರ ಕ್ರಾಂತಿಕಾರಿ ರಾಜಕೀಯ. ಈ ಎರಡು ಪ್ರಪಂಚಗಳಲ್ಲೂ ಬೇರುಬಿಟ್ಟ ಕೃಷ್ಣಪ್ಪ, ಗೌರಿ ದೇಶಪಾಂಡೆಯವರ ಲಿಬರಲ್ ಪ್ರಪಂಚ.

ಮಹೇಶ್ವರಯ್ಯ ಕೃಷ್ಣಪ್ಪನ ಒಂದು ಸಾಧ್ಯತೆ. ರಾಜಕೀಯದಲ್ಲಿ ಯಾವಾಗಲೂ ಅವಡುಗಚ್ಚಿಕೊಂಡೇ ಬದುಕಬೇಕಾದ ಅವನಿಗೆ, ಸಮಾಜಕ್ಕೆ ತನ್ನನ್ನು ಒಡ್ಡಿಕೊಳ್ಳದ ಮಹೇಶ್ವರಯ್ಯನಂಥ ಆತ್ಮಾರಾಮರು, ಬದುಕು ಮೆಚ್ಚುಗೆಯದ್ದಾಗಿತ್ತು. ಅವರ ವಿಚಿತ್ರ ಖಯಾಲಿಗಳ ಮಧ್ಯೆಯೂ ಮಹೇಶ್ವರಯ್ಯನಿಗೆ ಒಂದು ತರದ ನಿರ್ಲಿಪ್ತತೆ ಸಾಧ್ಯವಿತ್ತು. ದೈನಿಕವನ್ನು ತಿರಸ್ಕರಿಸದೆ ಅದನ್ನು ಮೀರುವ ಸಾಧ್ಯತೆ ಅವರಿಗೆ ತಿಳಿದಂತಿತ್ತು. ಬೆಟ್ಟದ ಭೈರಾಗಿ ಕೂಡ ಸಾಮಾಜಿಕ ಬದುಕಿನ ಬಗೆಗೆ ಆತನಿಗಿರುವ ನಿರ್ಲಕ್ಷದಿಂದಾಗಿ ಕೃಷ್ಣಪ್ಪನಲ್ಲಿ ಗಾಢ ಕುತೂಹಲ ಹುಟ್ಟಿಸಿದ.

ಹನುಮನಾಯ್ಕ ತನ್ನೆಲ್ಲ ಕಷ್ಟ ಕೋಟಲೆಗಳ ಮಧ್ಯೆಯೂ, ಇನ್ನೊಬ್ಬರನ್ನು ನಗಿಸಬಲ್ಲ ಜೀವನೋತ್ಸಾಹ ತುಂಬಿದವ. ತನ್ನ ಸಹಜ ಲವಲವಿಕೆಯಿಂದಲೇ ಕೃಷ್ಣಪ್ಪನ ಅಂತರಂಗಕ್ಕೆ ಅನಿವಾರ್ಯವಾದವ. ಈಜುವಾಗ ಮುಳುಗುತ್ತಿದ್ದ ಕೃಷ್ಣಪ್ಪನನ್ನು ಒಮ್ಮೆ ಅವನು ಬದುಕಿಸಿದ್ದ. ಹಾಗೆಯೇ ಕೃಷ್ಣಪ್ಪನ ಅತ್ಯಂತ ಸಂದಿಗ್ಧ ಸನ್ನಿವೇಶಗಳಲ್ಲಿ ಹನುಮನಾಯ್ಕ ಆತನಿಗೆ ತನ್ನ ಲವಲವಿಕೆಯಿಂದ ಹೊಸ ಜೀವ ಕೊಡುತ್ತಿದ್ದ ಎಂಬುದನ್ನು ಗಮನಿಸಬೇಕು. ಕೃಷ್ಣಪ್ಪ ಬೆಂಗಳೂರಿಗೆ ಬಂದು ನೆಲೆಸಿದಾಗ ಹನುಮನಾಯ್ಕ ಒಮ್ಮೊಮ್ಮೆ ಬಂದು ಅವನನ್ನು ಭೇಟಿಯಾಗುವಷ್ಟು ಸಲಿಗೆ ಅವರಲ್ಲಿ ಕೊನೆಯವರೆಗೂ ಇತ್ತು ಎಂಬುದನ್ನು ಗಮನಿಸಬೇಕು. ಇಂತಹ ಭೇಟಿಗಳ ಮೂಲಕ ಹನುಮನಾಯ್ಕ "ತನ್ನನ್ನು ಮತ್ತೆ ಹುಡುಗನನ್ನಾಗಿ ಮಾಡಿ ಬಿಡುವ ಗೆಣೆಯ" (ಪುಟ 169) ಎಂದು ಕೃಷ್ಣಪ್ಪ ಸ್ಮರಿಸಿಕೊಳ್ಳುವುದು, ಹನುಮನಾಯ್ಕ ಪ್ರತಿನಿಧಿಸುವ ಜೀವನ ಧೋರಣೆಗಳು ಕೃಷ್ಣಪ್ಪನ ಬದುಕಿನ ಒಂದು ಅಂಗ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಮುಖ್ಯವಾಗಿ ಗಮನಿಸಬೇಕಾದ ಇನ್ನೊಂದು ವಿಷಯ, ಕೃಷ್ಣಪ್ಪ ತನ್ನ ಅತ್ಯಂತ ಗೊಂದಲಮಯ ದಿನಗಳಲ್ಲೂ ಹನುಮನಾಯ್ಕನ ಲವಲವಿಕೆಯ ಭೇಟಿಯನ್ನು ಸಹಜ ಸ್ಫೂರ್ತಿಯಿಂದ ಸುಖಿಸುತ್ತಿದ್ದ ಎಂಬುದು.

ಆದರೆ, ಈ ಮಹೇಶ್ವರಯ್ಯ, ಹನುಮನಾಯ್ಕ ಇವರೆಲ್ಲ ಕೃಷ್ಣಪ್ಪನ ವ್ಯಕ್ತಿತ್ವದ ಒಂದು ಮುಖ, ಅಷ್ಟೆ. ಈ ಜೀವನದಲ್ಲೇ ಸಮಗ್ರತೆಯನ್ನು ಸಾಧಿಸಲು ಬಯಸುವ ಅವನು 'ಜೀವನ ಸಾಫಲ್ಯಕ್ಕೆ ಬೇರೆ ದಾರಿ ಕಾಣದೆ' (ಪುಟ 137) ರಾಜಕೀಯವನ್ನು ಆರಿಸಿಕೊಂಡಿದ್ದಾನೆ. ಅಣ್ಣಾಜಿ, ನಾಗರಾಜರ ಕ್ರಾಂತಿಕಾರಿ ರಾಜಕಾರಣ, ಅವರ ನಿಷ್ಠೆಯ ಪ್ರಖರತೆ ಇವೂ ಕೂಡ ಅವನ ವ್ಯಕ್ತಿತ್ವದ ಒಂದು ಮುಖ. ಪಕ್ಷ ರಾಜಕಾರಣ ಆತ ತನ್ನ ಕನಸುಗಳ ಸಾಕ್ಷಾತ್ಕಾರಕ್ಕೆ ಆಯ್ಕೆ ಮಾಡಿಕೊಂಡ ಕ್ಷೇತ್ರ. ಆದರೆ, ಈ ಮಾರ್ಗದ ಮಿತಿಗಳನ್ನೂ ಆತ ಬಲ್ಲವ. ಇದರ ಬಗ್ಗೆ ಅವನಿಗಿರುವ ಅಸಹನೆಯನ್ನು ಗಮನಿಸಿ :

"ಕೊಳೆಯುವುದೇ ಜಾಯಮಾನವಾದ ನಿತ್ಯಜೀವನದ ಕ್ಷೇತ್ರದಲ್ಲಿ ಪೂರ್ಣಶುದ್ಧಿ ಹುಡುಕೋದೇ ಅಸಂಬದ್ಧವಿರಬಹುದೇ ಎಂಬ ಪ್ರಶ್ನೆ ಅವನನ್ನು ಬಾಧಿಸುತ್ತದೆ. ಬಜೆಟ್ಟು, ಕಾಮಗಾರಿ, ಲಂಚ, ಬಡ್ತಿ, ವರ್ಗ, ನೌಕರಿ ಇತ್ಯಾದಿಗಳಲ್ಲಿ ಮುಳುಗಿಸುವ ರಾಜಕೀಯದಿಂದ ಮೇಲೇಳಲು ಕೃಷ್ಣಪ್ಪ ಸದಾ ಪ್ರಯತ್ನಿಸುತ್ತಾನೆ. ಕ್ರಾಂತಿಯ ಕನಸು ಕಾಣುತ್ತಾನೆ........." (ಪುಟ 13)

ವೀರಣ್ಣ ಮತ್ತಿತರರಿಗೆ ಇಂತಹ ವ್ಯವಸ್ಥೆಯನ್ನು ಕಾಯ್ದುಕೊಳ್ಳುವುದರಲ್ಲೇ ತಮ್ಮ ಸ್ವಾರ್ಥ ಅಡಗಿದೆ. ಹೀಗಾಗಿ ಅವರು ಇಂತಹ ವ್ಯವಸ್ಥೆಯನ್ನು ವೈಭವೀಕರಿಸುತ್ತಾರೆ. ಈ ವ್ಯವಸ್ಥೆ ಕುಸಿಯುವ ಅಪಾಯ ಕಂಡಾಗ ಕೃಷ್ಣಪ್ಪನಂತರವನ್ನು ಬಳಸಿಕೊಂಡು ಅದನ್ನು ಉಳಿಸಲು ಹೆಣಗಾಡುತ್ತಾರೆ. ಒಟ್ಟಾರೆ ಕ್ಷುದ್ರತೆಯಲ್ಲೇ ಮೈ

ಮರೆಯುಂವ ಭ್ರಷ್ಟ ಲೋಕ ಇದು. ಹೀಗಾಗಿಯೇ ಕೃಷ್ಣಪ್ಪನಿಗೆ ಕ್ರಾಂತಿಕಾರಿ ರಾಜಕಾರಣ ಅನಿವಾರ್ಯವಾಗಿ ಕಾಣುತ್ತದೆ.

ಆದರೆ. ಕ್ರಾಂತಿಕಾರಿ ರಾಜಕಾರಣದ ಬಗೆಗೂ ಆತನಿಗಿರುವ ಪ್ರಾಮಾಣಿಕ ಅನುಮಾನಗಳನ್ನು ಗಮನಿಸಬೇಕು. ಕಾರಸ್ಥಾನಗಳಲ್ಲೇ ಪಕ್ವವಾಗುತ್ತ ಹೋಗಬೇಕಾದ ಅಣ್ಣಾಜಿ ಬಯಸುವ ಕ್ರಾಂತಿ ದೈನಂದಿನ ಬದುಕನ್ನು ಕ್ಷುದ್ರ ಎಂದು ತಿರಸ್ಕರಿಸುತ್ತದೆ. ಕ್ಷುದ್ರ ಎಂಬಂತೆ ಕಾಣುವ ಈ ನಿತ್ಯ ಜೀವನದಲ್ಲೂ ಅರಳುವ ಸಣ್ಣ ಸುಖಗಳನ್ನು ಕ್ರಾಂತಿಯ ಆದರ್ಶದಲ್ಲಿ ಅವರು ಗಮನಿಸುವುದಿಲ್ಲ. ಈ ಕಾಂತ್ರಿಕಾರಿ ರಾಜಕಾರಣಕ್ಕೆ ಇನ್ನೂ ಅಪಾಯಕಾರಿಯಾದ ಮುಖವಿದೆ. ಇದು ಅನಿವಾರ್ಯವಾಗಿಸುವ ಉತ್ಕಟತೆ ಮನುಷ್ಯನನ್ನು ಮಿತಿಗೊಳಿಸುತ್ತದೆ; ಶುಷ್ಕವಾಗಿಸುತ್ತದೆ, ಒಮ್ಮೊಮ್ಮೆ ಅಸಹಜವಾಗಿಸುತ್ತದೆ ಕೂಡಾ. ಕೃಷ್ಣಪ್ಪ ನಾಗರಾಜನಲ್ಲಿ ಈ ಅಪಾಯವನ್ನು ಗುರುತಿಸುತ್ತಾನೆ:

"...ಆದರೆ ಸುಖ, ಸವಲತ್ತು, ದಾಕ್ಷಿಣ್ಯಗಳಿಂದ ಸಂಪೂರ್ಣ ವಿಮುಖನಾಗಿ ಈ ವರೆಗೆ ನಾಗರಾಜ ಬದುಕಿದ್ದ ಒಂಟಿ ಪಿಶಾಚಿಯಂತೆ. ತನ್ನ ತತ್ವಗಳಿಗೆ ಆತುಕೊಂಡು ತನ್ನ ವ್ಯಕ್ತಿತ್ವವನ್ನು ತೀವ್ರವಾಗಿ ಒಂದೇ ಗುರಿಗೆ ಮಿತಗೊಳಿಸಿ, ಕೆಂಪಗೆ ಕಾದ ಸಲಾಕೆಯಂತೆ. ಕೃಷ್ಣಪ್ಪನಿಗೆ ಅವನನ್ನು ಕಂಡು ಅಸೂಯೆಯಾಗುತ್ತಿತ್ತು. ಅವನ ಅಪಕ್ವತೆ ಕಂಡು ಗೊಂದಲವಾಗುತ್ತಿತ್ತು......." (ಪುಟ 139)

ರಾಜಕೀಯವಾಗಿ ಪ್ರಭಾವಶಾಲಿಯಾದ ಯುವಕರಿಂದ ಅತ್ಯಾಚಾರಕ್ಕೊಳಪಟ್ಟು ಆತ್ಮಹತ್ಯೆ ಮಾಡಿಕೊಂಡ ಹುಡುಗಿಯೊಬ್ಬಳ ಘಟನೆ ರಾಜ್ಯಾದ್ಯಂತ ಕೋಲಾಹಲ ವೆಬ್ಬಿಸುತ್ತದೆ. ಈ ಘಟನೆ ಪ್ರಸಕ್ತ ಆಡಳಿತದ ಮೇಲೂ ಪ್ರಭಾವ ಬೀರುವಷ್ಟು ಮಹತ್ವ ಪಡೆದಿರುತ್ತದೆ. ಇಂಥ ಘಟನೆ ಬಗ್ಗೆ ಕೃಷ್ಣಪ್ಪ ಮತ್ತು ನಾಗರಾಜರಲ್ಲಿ ನಡೆದ ಚರ್ಚೆ ಅವರೀರ್ವರೂ ಬಯಸುವ ರಾಜಕೀಯ ವಾತಾವರಣದ ಬಗ್ಗೆ ಬೆಳಕು ಚೆಲ್ಲುವಷ್ಟು ಸಮರ್ಥವಾಗಿದೆ. ಕೃಷ್ಣಪ್ಪನಿಗೆ, ಒಬ್ಬ ಹುಡುಗಿಗಾದ ಈ ದುರಂತ ಅತ್ಯಂತ ನೋವುಂಟುಮಾಡುತ್ತದೆ. ಆದರೆ ನಾಗರಾಜನ ಪಾಲಿಗೆ ಇದೊಂದು ಪಾರ್ಲಿಮೆಂಟರಿ ಪ್ರಜಾಪ್ರಭುತ್ವದಲ್ಲಿ ಅನಿವಾರ್ಯವಾಗಿ ಇರುವ ಪಿಡುಗು. ಆತ, ನಿರ್ಭಾವದಿಂದ, ಹುಡುಗಿ ಕೊಲೆಯನ್ನು ಬೇರೆ ಬೇರೆ ಗುಂಪುಗಳು ತಮ್ಮ ಅಧಿಕಾರ ಸ್ಥಾಪನೆಗೆ ಬಳಸಬಹುದು ಎಂಬುದನ್ನು ಚಿಂತಿಸುತ್ತಾನೆ. ಕೃಷ್ಣಪ್ಪ "ನನಗೆ ಪ್ರೇಮ ಮುಖ್ಯ, ಅದನ್ನ ಕಳಕೊಂಡು ಎಂಥ ಕ್ರಾಂತಿ ಮಾಡೋಕೆ ಸಾಧ್ಯ? ಮಾಡಿ ಏನು ಪ್ರಯೋಜನ" ಎಂದು ಸ್ವಯಂಸ್ಫೂರ್ತಿಯಿಂದೆಂಬತೆ ಹೇಳುತ್ತಾನೆ.

ಕೃಷ್ಣಪ್ಪನ ಕ್ರಾಂತಿಕಾರಿ ವ್ಯಕ್ತಿತ್ವಕ್ಕೆ ಮನಸೋತ ನಾಗೇಶನಿಗೆ, 'ಎಲ್ಲರಂತೆ ಉದ್ಯೋಗಿಯಾಗಿ ಬದುಕೋದು ಕಳಪೆ' ಎನಿಸುತ್ತದೆ. 'ಭಾರತೀಪುರ' ಕಾದಂಬರಿ

ಯಲ್ಲಿ ಕೂಡಾ ಕ್ರಾಂತಿಕಾರಿ ರಾಜಕಾರಣಕ್ಕಿರುವ ಇಂತಹ ಅಪಾಯಕಾರಿ ಆಯಾಮದ ಬಗ್ಗೆ ಪ್ರಸ್ತಾಪ ಇದೆ. ಒಂದೇ ತತ್ವಕ್ಕೆ ತನ್ನನ್ನು ಮುಡಿಪಾಗಿಟ್ಟುಕೊಂಡ ವ್ಯಕ್ತಿತ್ವ ಹೇಗೆ ಕಠಿಣವಾಗುತ್ತ, ಮುರುಟಿಕೊಳ್ಳಬಹುದು ಎಂದು ಜಗನ್ನಾಥ ಚಿಂತಿಸುತ್ತಾನೆ. ಈ ಸಂದರ್ಭವಲ್ಲಿ ಆತ ಯೇಟ್ಸ್ ಕವಿಯ Eastu 1916 ಎಂಬ ಕವನದ ಕೆಲವು ಸಾಲುಗಳನ್ನು ನೆನಪಿಸಿಕೊಳ್ಳುವುದನ್ನು ಗಮನಿಸಬಹುದು. ವ್ಯಕ್ತಿ ತನ್ನ ಸಹಜತೆಯನು ಕಳಕೊಳ್ಳುವಂತೆ ಮಾಡುವ ಈ ವಿಧಾನಗಳೂ ಅಪರಿಪೂರ್ಣ ಎಂಬ ಅರಿವು ಕಾದಂಬರಿಯ ಪ್ರಮುಖ ನಿಲ್ಲುವುಗಳಲ್ಲೊಂದು, ಮಹೇಶ್ವರಯ್ಯ ಹನುಮನಾಯ್ಕ ಇವರೆಲ್ಲ ದೈನಂದಿನ ಬದುಕಿನ ಕ್ಷುದ್ರತೆಯನ್ನು ತಮ್ಮ ವೈಯಕ್ತಿಕ ವಿಶಿಷ್ಟತೆಯ ಮೂಲಕ ಮಾತ್ರ ಮೀರಲು ಸಾಧ್ಯ ಅಣ್ಣಾಜಿ, ನಾಗರಾಜ ಮೊದಲಾದವರಿಗೆ ದೈನಂದಿನ ಬದುಕು ಗಂಭೀರ ಪರಿಗಣನೆಗೆ ಯೋಗ್ಯವಾದದ್ದಲ್ಲ. ಆದರೆ ಕೃಷ್ಣಪ್ಪನಿಗೆ ಈ ದೈನಿಕಕ್ಕೆ ಪ್ರಭೆ ತರುವ ಹೋರಾಟದಲ್ಲಿ ಮಾತ್ರ ನಂಬಿಕೆ. ಉಳಿದೆರಡು ವಿಧಾನಗಳೂ ಪರಿಪೂರ್ಣವಾದ ಜೀವನ ಧರ್ಮಗಳಲ್ಲ. ಇವೆರಡೂ ಒಂದಕ್ಕೊಂದು ಪೂರಕವಾಗಿ ಬೆಳೆಯುವ ಸಮಾಜಮಾತ್ರ ಆರೋಗ್ಯವಂತ ಸಮಾಜವಾಗಿರಲು ಸಾಧ್ಯ.

ಈ ಎರಡು ಪ್ರಪಂಚಗಳ ಮಧ್ಯೆ ಇರುವ ಕಂದರವನ್ನು ಸಹಜಸ್ಫೂರ್ತಿಯಿಂದ ಅರಿತವರು ಕೃಷ್ಣಪ್ಪ ಮತ್ತು ಗೌರಿ ದೇಶಪಾಂಡೆ. ಕೃಷ್ಣಪ್ಪ ತನ್ನ ಬದುಕಿನ ಕೊನೆಯ ಎರಡು ಆಸೆಗಳನ್ನು ಗೌರಿಯಲ್ಲಿ ತೋಡಿಕೊಳ್ಳುವುದು ಈ ದೃಷ್ಟಿಯಲ್ಲಿ ಅರ್ಥಪೂರ್ಣವಾದುದು. ಕಾದಂಬರಿಯ ಕೊನೆಯಲ್ಲಿ ಬರುವ ಕೃಷ್ಣಪ್ಪನ ಈ ಮಾತುಗಳನ್ನು ಗಮನಿಸಿ.

ಇನ್ನು ಎರಡು ಆಸೆಗಳು ನನಗಿವೆ, ಅಶ್ವತ್ಥಮರದ ಬುಡದಲ್ಲಿ ಕೂತು ಕಾಲದ ನಿರಂತರತೆಯನ್ನು ಅನುಭವಿಸಬೇಕು ಅನಿಸತ್ತೆ. ಅಪರೂಪಕ್ಕೆ ಕಾಣಿಸಿಗೊಳ್ತಿದ್ದ ಆ ಪಕ್ಷೀನ ಆಗ ಕಂಡು ಪಡ್ತ ಇದ್ದ ಆಶ್ಚರ್ಯವನ್ನು ಮತ್ತೆ ಪಡಬೇಕೂಂತ ಆಸೆಯಾಗುತ್ತೆ... ಈ ಆಸೇನ್ನ ನಿನಗೆ ಮತ್ತು ಮಹೇಶ್ವರಯ್ಯನಿಗೆ ಮಾತ್ರ ಹೇಳಲಿಕ್ಕೆ ನನಗೆ ಸಾಧ್ಯ. ಇನ್ನೊಂದು ಆಸೆ ಇದೆ. ಅದು ಇದು ಬೇರೆ ಬೇರೆ ಅಂತ ನನಗೆ ಅನ್ನಿಸಲ್ಲ, ಆದರೆ ಅದನ್ನು ನಿನಗೂ ನಿಜಾ ಅನ್ನಿಸೋ ಹಾಗೆ ನಾನು ಹೇಗೆ ಹೇಳಲಿ ಗೊತ್ತಾಗಲ್ಲ. ಈ ದೇಶದಲ್ಲಿ ನಾವೆಲ್ಲ ದಡ ಹತ್ತಿರೊ ಜನ, ಈ ಜನದ ಸವಲತ್ತುಗಳನ್ನು ಹೆಚ್ಚಿಸೊ ರಾಜಕೀಯ ಈ ತನಕ ಮಾಡಿದ್ದಾಯ್ತು....ಯಾವತ್ತೂ ನಮ್ಮ ಚರಿತ್ರೇಲಿ ದಡ ಹತ್ತದೇನೇ ಇದಾರಲ್ಲ ಅವರಿಗೆ ಸಿಟ್ಟು ಬರೋ ಹಾಗೇ ಮಾಡಕ್ಕೆ ಸಾಧ್ಯವಾದರೆ ಆ ಸಿಟ್ಟು ಸಮಾಜದ ಕ್ಷುದ್ರತೇನ ಸುಟ್ಟೀತು, ಅಲ್ವ? ಆಸೆ

ಇನ್ನೂ ಉಳ್ಕಂಡಿದೆ... (ಪುಟ 177)ಗೌರಿಯಲ್ಲಿ ಕೂಡಾ ಇದೇ ತಹತಹ ಕೃಷ್ಣಪ್ಪ ಕಾಣುತ್ತಾನೆ. "ತನಗಿದ್ದ ನಂಬುವ ಆಸೆ, ಇದು ಸಾಧ್ಯವೇ ಎಂಬ ಆತಂಕ ಎರಡನ್ನು ಗೌರಿಯಲ್ಲಿ ಕಂಡು ಕೃಷ್ಣಪ್ಪನಿಗೆ ಇನ್ನು ಹೆಚ್ಚು ಮಾತಿನ ಅಗತ್ಯವಿಲ್ಲವೆನಿಸಿತ" (ಪುಟ177).

ಈ ಎರಡು ಆಸೆಗಳು ಕೂಡಾ ಪ್ರಸಕ್ತ ಯಂತ್ರಯುಗದ ಸಂಸ್ಕೃತಿಗೆ ರೊಮ್ಯಾಂಟಿಕ್ ಪ್ರತಿಕ್ರಿಯೆಯ ರೂಪದಲ್ಲಿವೆ. ಕನ್ನಡದ ಇನ್ನೊಬ್ಬ ಪ್ರಮುಖ ಕಾದಂಬರಿಕಾರರಾದ ಯಶವಂತ ಚಿತ್ತಾಲರಲ್ಲೂ ಕೂಡಾ ಆಧುನಿಕ ಸಂಸ್ಕೃತಿಗಿರುವ ಈ ಸೆಳೆತಗಳ ಬಗ್ಗೆ ಪ್ರಸ್ತಾಪ ಇದೆ. ಅವರ ಪ್ರಮುಖ ಕಾದಂಬರಿಯಾದ 'ಶಿಕಾರಿ' ಯ ನಾಗಪ್ಪನ ಕೊನೆಯ ಎರಡು ನಿರ್ಧಾರಗಳಲ್ಲಿ ಒಂದು, ಪುನಃ ಹನೇಹಳ್ಳಿಗೆ ವಾಪಸ್ಸಾಗಿ ತನ್ನ ಬದುಕಿನ ಹಳೆಯ ಬೇರುಗಳನ್ನು ಹುಡುಕುವುದು ಸ್ಥಿತ್ಯಂತರದ ಹೊಸ್ತಿಲಲ್ಲಿರುವ ಸಮಾಜದ ಈ ಸಂಕ್ರಮಣ ಅವಸ್ಥೆಯನ್ನು ಸೃಜನಶೀಲ ಬರಹಗಾರ ಯಾವರೀತಿಯಲ್ಲೂ ತಪ್ಪಿಸಿಕೊಳ್ಳಲಾರ ಎಂಬುದಕ್ಕಾಗಿ ಚಿತ್ತಾಲರನ್ನು ಇಲ್ಲಿ ಹೆಸರಿಸ ಬೇಕಾಯಿತು. ●

It may, therefore, be regarded as certa in that, Since speech is the medium through which man has advaced from concrete to abatract thinking, the categories of speech, which as we know them are Purely formal and abstract, must in the intial stage have been fanctional and Concrete ; and, that being so, there origin must be sought in the abour of production.

George Thomson.

# ಇತಿಹಾಸ : ಜಾತಿ ಮತ್ತು ವರ್ಗ ಸಂಬಂಧಗಳು

—ಸುಚೇತನ ಸ್ವರೂಪ

**ಕಳೆದ ಸಂಚಿಕೆಯಿಂದ :**

ಪ್ರಾಚೀನ ಕಾಲದ ಬ್ರಾಹ್ಮಣರು ಗ್ರೀಕ್ ತತ್ವಜ್ಞಾನಿಗಳಿಗೆ ಸಮಾನ : ಹಾಗೆಂದು ಕಾರ್ಲ್‌ಮಾರ್ಕ್ಸ್ ಬರೆದಿದಾನೆ ಎಂದು ಹೇಳಿಕೊಳ್ಳುತ್ತ ತನ್ನ ಜಾತಿ ಬಗೆಗಿನ ಹೆಮ್ಮೆಯನ್ನು ಬ್ರಾಹ್ಮಣ ಮಾರ್ಕ್ಸ್‌ವಾದಿ ಡಬಲ್ ಮಾಡಿಕೊಳ್ಳುವಂತೆ, ಬಸವಣ್ಣ ಕರ್ನಾಟಕದ ಪ್ರಥಮ ಸೋಷಲಿಸ್ಟ್ ಎಂದು ಬೀಗುವ ಲಿಂಗಾಯಿತ – ಲೋಹಿಯಾವಾದಿ, ಮತ್ತೊಂದು ರೀತೀಲಿ ಜಾತಿ ಅಭಿಮಾನಿಯಾಗಿಯೇ ಉಳಿದಿರುವುದು ಸಂಭವನೀಯ ಹಾಗೂ ಜೆ. ಎಚ್. ಪಟೇಲರಂತೋರಿಗೆ ಲಿಂಗಾಯಿತ ಸ್ವಾಮಿ ಕಾಲಿಗೆ ಬೀಳುವುದು ತಪ್ಪೆನಿಸುವುದಿಲ್ಲ. ಏಕೆಂದರ 12ನೇ ಶತಮಾನದಲ್ಲೇ ಸಮಾಜವಾದೀ - ಸಮಾಜ ಸ್ಥಾಪನೆಗೆ ಪ್ರಯತ್ನ ನಡೆಸಿದ ಪರಂಪರೆಗೆ ಸೇರಿದವನಾಗಿ ಆ ಸ್ವಾಮಿ ಕಾಣಬರುತ್ತಾನೆ. ಮಾರ್ಕ್ಸ್‌ನ ಯಾವ ಅರ್ಥದಲ್ಲಿ ಗ್ರೀಕ್ ತತ್ವಜ್ಞಾನಿಗಳ ಜತೆ ಬ್ರಾಹ್ಮಣರನ್ನು ಹೋಲಿಸಿದ ? ಬಸವಣ್ಣ ಮತ್ತು ಲೋಹಿಯಾ ನಡುವೆ ಇರುವ ಅಂತರ ಏನು? ಆ ಜಾತಿಗಳಲ್ಲಿ ಹುಟ್ಟಿ ಬಂದ ಕಾರಣ ಆ ಬಗ್ಗೆ ಹೆಮ್ಮೆಯಿಂದ ಮಾತನಾಡಿದರೆ ಜನ ಅನುಮಾನದಿಂದ ನೋಡುವುದಿಲ್ಲವೇ ? ಆ ಕುರಿತ ಚರ್ಚೆ ನಮ್ಮ ಮುಂದಿರುವ ಸಮಾಜವಾದ ಸಂಘಟನೆಯ ಕಾರ್ಯ ಚಟುವಟಿಕೆಗಳಿಗೆ ಎಷ್ಟು ಸಂಗತ ? ಎಂದು ಅವರು ಯೋಚಿಸಲು ಹೋಗುವುದೇ ಇಲ್ಲ.

ಮೂಲದಲ್ಲೂ ಅವರು ಜಾತಿ ಅಭಿಮಾನಿಗಳಾಗಿಯೇ ಉಳಿದುಕೊಂಡಿರುವುದರಿಂದ, ಲೋಹಿಯಾ ಹೇಳಿದ್ದನ್ನೇ ಬಸವಣ್ಣ 12ನೇ ಶತಮಾನದಲ್ಲಿಯೇ ಹೇಳಿದ್ದರು ಎಂದು ಲಿಂಗಾಯಿತ ಲೋಹಿಯಾವಾದಿ ನಂಬಿದರೆ : ಮಾರ್ಕ್ಸ್ ಹೇಳಿದ್ದನ್ನೇ 'ಸರ್ವಜನೋ ಸುಖಿನೋಭವಂತು' ಎಂಬ ಮಾತಿನಲ್ಲಿ ? ನಮ್ಮ ಪೂರ್ವಜರು ನುಡಿದಿದ್ದರು ಎಂದು ಬ್ರಾಹ್ಮಣ - ಮಾರ್ಕ್ಸ್‌ವಾದಿ ಹೆಮ್ಮೆ ಪಡುತ್ತಾನೆ. ಆ ಕಾರಣ ನಾವು

---

ಸುಚೇತನ ಸ್ವರೂಪ, ಉಪಸಂಪಾದಕ, ಪ್ರಜಾವಾಣಿ, ನಂ. 75, ಎಂ. ಜಿ. ರಸ್ತೆ, ಬೆಂಗಳೂರು-560 001.

ಹುಟ್ಟಿ ಮಾರ್ಕ್ಸ್ ಅಥವಾ ಲೋಹಿಯಾವಾದಿಗಳಾಗಿದ್ದೇವೆ. ಆ ಸಂಘಟನೆಗಳ ನಾಯಕರಾಗುವುದು ನಮ್ಮ ಜನ್ಮಸಿದ್ಧ ಹಕ್ಕು. ನಾವು ಹೇಳಿದಂತೆ ಉಳಿದವರೆಲ್ಲ ಕೇಳಬೇಕು. ನಮ್ಮ ಬಿಟ್ಟು ಬೇರೆಯವರೆಲ್ಲ ಬದಲಾಗಬೇಕು. ಎಂದು ಅವರು ಹೋರಡಂತ್ತಾರೆ. ಹಾಗೆಂದು ಅವರು ನೇರವಾಗಿ ಬಾಯಿಬಿಟ್ಟು ಹೇಳಲಾರರು. ಆದರೆ ಅವರ ವರ್ತನೆಯೆಲ್ಲ ಆ ಗತ್ತಿನಲ್ಲೇಯಿರುತ್ತದೆ. ಕೆಲವರು ಬಾಯಿಬಿಟ್ಟು ಹೇಳವುದೂ ಉಂಟು. ಶೂದ್ರರಿಗೆ, ಮಾರ್ಕ್ಸ್‌ವಾದ ಎಲ್ಲಿ ಅರ್ಥವಾದೀತು : ಎಂದು ಕೆಲ ಬ್ರಾಹ್ಮಣ - ಮಾರ್ಕ್ಸ್‌ವಾದಿಗಳು ಹೇಳುವುದನ್ನು ; ನಿಮ್ಮ ಕಿವಿಗಳು ಕೇಳಿಸಿ ಕೊಂಡಿರಬಹುದು.

ಅಷ್ಟೇ ಅಲ್ಲ. ಆ ಮೂಲಕ ಕೆಳಜಾತಿ ಶೂದ್ರರಿಗೆ ಏನೋ ದೊಡ್ಡ ಉಪಕಾರ ಮಾಡುತ್ತಿದ್ದೇವೆ. ಅದಕ್ಕೆ ಪ್ರತಿಯಾಗಿ ಅವರು ನಮಗೆ ಋಣಿಗಳಾಗಿರಬೇಕು, ಎಂದು ನಿರೀಕ್ಷಿಸಿದ ನಿದರ್ಶನಗಳಿವೆ ಬಿಹಾರದಲ್ಲಿ ಹಿಂದುಳಿದ ವರ್ಗದ ಜನರಿಗಾಗಿ ಮೀಸಲಾತಿ ಜಾರಿಗೆ ಬಂದಾಗ, ರಕ್ತಪಾತ ಉಂಟಾಯಿತು : ಆದರೆ ಕರ್ನಾಟಕದಲ್ಲಿ ಹಾಗಾಗಲಿಲ್ಲ ; ಅದಕ್ಕೆ ಕಾರಣ, ಬಸವಣ್ಣ ನಿರ್ಮಿಸಿದ ಪರಂಪರೆ, ಎಂದು ಲಂಕೇಶ್ ತಮ್ಮ 'ಪತ್ರಿಕೆ'ಯಲ್ಲಿ ಬರೆದುಕೊಂಡಿದ್ದಾರೆ. ಆ ಮಾತುಗಳನ್ನು ಇಂದಿರಾ ಗಾಂಧಿ ಬರೆದ ಪುಸ್ತಕ ಎಂದು ಪ್ರಚಾರಕ್ಕೆ ಬಂದಿರುವ, Eternal India ದಲ್ಲಿ ಬರುವ ಈ ಮಾತುಗಳ ಜತೆ ಹೋಲಿಸಿ - ಕೆಳಜಾತಿ ಶೂದ್ರರನ್ನು ಬೇರೆ ದೇಶದಲ್ಲಾಗಿದ್ದರೆ ಕೊಂದುಹಾಕಿಬಿಡುತ್ತಿದ್ದರು. ಆದರೆ ಭಾರತದಲ್ಲಿ ಹಾಗೆ ಮಾಡಲಿಲ್ಲ; ಹಿಂದೂ ಸಂಸ್ಕೃತಿ ಅಷ್ಟು ಉದಾತ್ತವಾದದ್ದು ಇತ್ಯಾದಿ. ಏನಾದರೂ ಅಂತರ ಇದೆಯೇ ? ಇಂದಿರಾ ಗಾಂಧಿ ಪ್ರಕಾರ ಕೆಳಜಾತಿ ಶೂದ್ರರು ಜೀವದಿಂದುಳಿಯಲು ಬ್ರಾಹ್ಮಣ ಕರುಣೆ ಕಾರಣವಾದರೆ : ಲಂಕೇಶ್ ಪ್ರಕಾರ, ಹಿಂದುಳಿದ ವರ್ಗದ ಜನರಿಗೆ ಮೀಸಲಾತಿ ಸೌಲಭ್ಯ ದೊರಕಲು, ಲಿಂಗಾಯಿತರ ದೊಡ್ಡತನ ಕಾರಣ. ಅವರಿಬ್ಬರ ಮಾತಿನ ಅರ್ಥ ಇಷ್ಟೆ : ಕೆಳಜಾತಿ ಶೂದ್ರರು ಬೇರೆಯವರ ದಯೆಯಿಂದ ಬದುಕಿದ್ದಾರೆ. ಅವು ಒಂದು ತರಹದ ಪ್ರಾಣಿಗಳು.

ಕೆಳಜಾತಿ ಶೂದ್ರರನ್ನು ಸಂಪೂರ್ಣವಾಗಿ ಕೈ ತೊಳೆದಂತೆ ಕೊಂದುಹಾಕಿದ್ದಲ್ಲಿ, ಈ ಎಲ್ಲವನ್ನು ನಿರ್ಮಿಸಲು ಕಲ್ಲು - ಮಣ್ಣು ಹೊರಲು ಯಾರಿರುತ್ತಿದ್ದರು ? ಬಸವಣ್ಣ ನಿಗೆ ಲಿಂಗಾಯಿತ ಸಮಾಜದಲ್ಲಿ ಎಷ್ಟು ಕಾಸಿನ ಕಿಮ್ಮತ್ತಿದೆ ? ರಾಜ್ಯಾಂಗದ ಪ್ರಕಾರ ಒಕ್ಕಲಿಗರಿಗೆ ಮೀಸಲಾತಿ ದೊರಕುವಂತಿಲ್ಲ. ಒಕ್ಕಲಿಗರು – ಲಿಂಗಾಯಿತರನ್ನು ಬೇರ್ಪಡಿಸುವ ಏಕೈಕ ಉದ್ದೇಶದಿಂದ ಒಕ್ಕಲಿಗರನ್ನು ಹಿಂದುಳಿದ ವರ್ಗದ ಪಟ್ಟಿಯಲ್ಲಿ ಸೇರಿಸಬೇಕಾಯಿತು. ದೇವರಾಜ ಅರಸು ಆ ಕುಟಿಲ ನೀತಿ ಅನುಸರಿಸದಿದ್ದಲ್ಲಿ ಏನಾಗುತ್ತಿತ್ತು ? ಎಂದು ಇಂದಿರಾ ಗಾಂಧಿ ಮತ್ತು ಲಂಕೇಶ್ ಯೋಚಿಸಿದ್ದರೆ !

ಮಾರ್ಕ್ಸ್‌ವಾದಿ ಅಥವಾ ಲೋಹಿಯಾವಾದಿ ಆಗೋದು ಎಂದರೆ ವರ್ಗ ಮತ್ತು ಜಾತಿ ಮೂಲವಾದ ಎಲ್ಲ ಅಹಂಕಾರಗಳಿಂದ ಬಿಡಿಸಿಕೊಂಡು ಮನುಷ್ಯರಲ್ಲಿ ಒಂದಾಗುವುದು : ಎಂಬುದು ಅವರ್‍ಯಾರಿಗೂ ಬೇಕಿರುವುದಿಲ್ಲ. ಮಾರ್ಕ್ಸ್‌ವಾದಿಯಾದ ಬ್ರಾಹ್ಮಣ ಮತ್ತು ಲೋಹಿಯಾವಾದಿಯಾದ ಮೇಲ್ಜಾತಿ ಶೂದ್ರ ಹೆಚ್ಚು ಮನುಷ್ಯರಾಗಬಹುದಾದಂತೆಯೇ ಮಾಮೂಲಿ ಬ್ರಾಹ್ಮಣ ಮತ್ತು ಮೇಲ್ಜಾತಿ ಶೂದ್ರರಿಗಿಂತ ಬಹಳ ಅಪಾಯಂಕಾರಿಯೂ ಆಗಿಬಿಡಬಹುದಾದ ಸಾಧ್ಯತೆಗಳು ಅಲ್ಲಿಯೇ ಇರುತ್ತವೆ. ಯಾವುದೇ ತತ್ವ, ಸಿದ್ಧಾಂತ ಅಥವಾ!ವಾದ ಅಣುಶಕ್ತಿ ಇದ್ದ ಹಾಗೇ !

*　　　　*　　　　*

ಜಿಲ್ಲಾ ಪರಿಷತ್ ಮಸೂದೆ ಕುರಿತ್ತೇ ಸಂಭ್ರಮದಿಂದ ಮಾತನಾಡುವ ತೇಜಸ್ವಿ, ಅದೇ ಜನತಾ ಸರ್ಕಾರ ಒತ್ತುವರ್‍ಯ ಭೂಮಿ ಸಾಗುವಳಿ ಸಕ್ರಮಗೊಳಿಸಿದ ಬಗ್ಗ ಚಕಾರ ಎತ್ತಲಿಲ್ಲ. ಲೋಹಿಯಾ ವಿಕೇಂದ್ರೀಕರಣ ನೀತಿ ಸಮಾಜವಾದಿ ಆರ್ಥಿಕ – ರಾಜಕೀಯ – ಸಾಮಾಜಿಕ ನೆಲಗಟ್ಟಿನ ಮೇಲೆ, ಹಳ್ಳಿಯಿಂದ ದಿಳ್ಳಿಯ ವರೆಗೆ ಅರಳುವಂತಾದ್ದು, ಆದರೆ ಈ ದೇಶದ ಆರ್ಥಿಕ ನೀತಿ, ಬಡಕಲು ಕುದುರೆ ತರಹ ಬಂಡವಾಳಶಾಹಿ ದಿಕ್ಕಿನಲ್ಲಿ ಹೋಗುತ್ತಿದೆ. ಪರಿಸ್ಥಿತಿ ಹೀಗಿರುವಾಗ ವಿಕೇಂದ್ರೀಕರಣ ಎಲ್ಲಿ ಸಾಧ್ಯ ಯಾವುದರ ವಿಕೇಂದ್ರೀಕರಣ. ಹಾಗಾಗಿ ಲೋಹಿಯಾ ಹೇಳಿದ ವಿಕೇಂದ್ರೀಕರಣ ನೀತಿಗೂ, ನಜೀರ್ ಸಾಬರ ಜಿಲ್ಲಾ ಪರಿಷತ್ ಮಸೂದೆಗೂ ಅರ್ಥಾತ್ ಸಂಬಂಧವಿರುವುದು ಸಾಧ್ಯವಿಲ್ಲ.

ಒಂದು ತುಂತ್ತು ಅನ್ನಕ್ಕಾಗಿ ಹಳ್ಳಿ ಭೂಮಾಲೀಕನ ನೆರಳಲ್ಲಿ ಬದುಕಬೇಕಿರುವ ಕೃಷಿ ಕಾರ್ಮಿಕನಿಗೆ, ಆ ಮಸೂದೆ ಏನು ಹೇಳುತ್ತದೆ ! ನೆಲೆಯೇ ಇಲ್ಲದ ಅವನ್ನು ಪಂಚಾಯತ್ ರಾಜ್ಯದ ಆಡಳಿತ ನಿರ್ವಹಣೆಯಲ್ಲಿ ಹೇಗೆ ತಾನೇ ಭಾಗವಹಿಸುವುದು ಸಾಧ್ಯ. ನಜೀರ್ ಸಾಬರ ಮಸೂದೆಯ ಉಪಯೋಗ ಕಾಣುವುದು . ಆಸ್ತಿಯ ಬೆನ್ನೆಲುಬುಳ್ಳವರಿಗೆ - ಅಂದರೆ ಬ್ರಾಹ್ಮಣರಿಗೆ ಮತ್ತು ಮೇಲ್ಜಾತಿ ಶೂದ್ರರಿಗೆ, ಅದು ಗೊತ್ತಿದ್ದೂ ತೇಜಸ್ವಿ ಆ ಮಸೂದೆಯನ್ನು ಸ್ವಾಗತಿಸಿದ್ದು, ಸಹಜವಾಗಿಯೇ ಇದೆ. ತಮ್ಮ ವರ್ಗ ಮತ್ತು ಜಾತಿ ಹಿತಾಸಕ್ತಿಗೆ ಲೋಹಿಯಾ ವಿಕೇಂದ್ರೀಕರಣ ನೀತಿಯ ಬುರ್ಖಾ ಹಾಕಿದ್ದರು. ಆದರೆ ಒತ್ತುವರಿ ಭೂಮಿ ಸಾಗುವಳಿ ಸಕ್ರಮ ಮಾಡಿದ್ದರಿಂದ ಬಹುಪಾಲು ಲಾಭ ಆಗೋದು ಮತ್ತೆ ಮೇಲ್ಜಾತಿ ಶೂದ್ರರಿಗೆ. ಆ ಹಗಲು ದರೋಡೆಗೆ ಲೋಹಿಯಾವಾದದ ಲೇಪನ ಹಾಕಲು ಸಾಧ್ಯವಾಗಲಿಲ್ಲ ಎಂದು ಕಾಣುತ್ತದೆ. ವಿನೋಭಾನಂತೆ ಮೌನಿಯಾದರು.

ಪಶ್ಚಿಮ ಬಂಗಾಳದಲ್ಲಿ ಈವತ್ತು ಜಿಲ್ಲಾ ಪರಿಷತ್‌ಗಳು ಭ್ರಷ್ಟಾಚಾರದಿಂದ ಕೊಳೆತು ನಾರಂತ್ತಿವೆ. ಅಂತಹ ತೇಪೆದಾರಿ ಪ್ರಯತ್ನಗಳಿಂದಾಗಿ, ಒಂದು ಪರಿಣಾಮ ಆಗುಂತ್ತದೆ. ಮಳೆನಾಡಿನಲ್ಲಿ ಬೀಳುವ ಮಳೆಯಿಂದ ಸಿಡಿದ ಕೆಲವು ಹನಿಗಳು, ಮಳೆ ನಾಡಿನ ಸೆರಗು ಪ್ರದೇಶದಲ್ಲೂ ಬೀಳುವಂತೆ ಬ್ರಾಹ್ಮಣ ವರ್ಗದ ಕಾಲಂ ಸೇವೆ ಮಾಡ ಬೇಕಾದ ಸ್ಥಿತಿಯಲ್ಲಿರುವ ಕೆಳಜಾತಿ ಶೂದ್ರ ಸಮುದಾಯಂದಲ್ಲಿ ಕೆಲವರಿಗೆ, ಏನೋ ಒಂಚೂರು ಎಂಜಲು ದಕ್ಕುತ್ತದೆ ಈವತ್ತಿನ ರಾಜಕೀಯದಲ್ಲಿ ಆಗುತ್ತಿರೊ ಹಾಗೇ. ಕೆಳಜಾತಿ ಮತ್ತು ಕೆಳವರ್ಗದ ಜನ ತಮ್ಮ ಸರದಿಯೂ ಬರಬಹುದು ಎಂಬ ಆಸೆಗಣ್ಣಿ ನಿಂದ ನೋಡುತ್ತಾ ಕೂಡುತ್ತಾರೆ. ಒಟ್ಟಾರೆ ವ್ಯವಸ್ಥೆ ಬಗ್ಗೆ ದ್ವೇಷ, ಜಿಗುಪ್ಸೆ ಬರದಂತೆ ನೋಡಿಕೊಳ್ಳಲು ಮತ್ತು ಆಳುವ ವರ್ಗದ ಜನ ತಮಗಾಗಿ ಏನೋ ಮಾಡುತ್ತಾ ಇದಾರೆ ಎಂದು ಭ್ರಮೆ ಹುಟ್ಟಿಸಲು ಈ ತರಹದ ಪ್ರಯತ್ನಗಳು ಸಹಾಯ ಮಾಡುತ್ತವೆ. ಈ ಕಡೆ ಸಾಯಲೂ [illegible]ಡದ, ಆ ಕಡೆ ಬದುಕಲೂ ಆಗದ ಸ್ಥಿತಿಯಲ್ಲಿ ಹಾತಾಡಿಕೊಂಡು, ದಾರಿ ಸವೆಯು[illegible]ದೆ. ಸೋವಿಯತ್ ರಷ್ಯಾದ ಅಧಿಕಾರ ಶಾಹಿ ಕಮ್ಯೂನಿಸ್ಟರಿಗೆ ಬೇಕಿರುವುದೂ ಅದೇ !

*　　　*　　　*

ಲೆನಿನ್ ಕನಸಿದ್ದೇ ಬೇರೆ. ಸೋವಿಯತ್ ರಷ್ಯಾ ಆದದ್ದೇ ಬೇರೆ, ಸೋವಿ ಯತ್ ರಷ್ಯಾ ಮತ್ತು ಚೀನಾ ನಡುವೆ ಸಂಬಂಧ ಹಳಸಿಕೊಂಡು ಯಾವುದೋ ಕಾಲ ವಾಯಿತು. ಆದರೆ ಅದೇ ಸೋವಿಯತ್ ರಷ್ಯಾ, ಭಾರತದ ಜತೆ ಉತ್ತಮ ಸಂಬಂಧವಿಟ್ಟುಕೊಂಡಿದೆ. ಈ ವಿಚಿತ್ರ ಹೇಗೆ ಸಾಧ್ಯವಾಯಿತು. ತನ್ನ ಚಕ್ರಾಧಿ ಪತ್ಯದ ಕಕ್ಷೆಯಲ್ಲಿ ಉಪಗ್ರಹವಾಗಲು ನಿರಾಕರಿಸಿದ ಚೀನಾ ಜತೆಗಿನ ಸಂಬಂಧವನ್ನು ಕಡಿದುಕೊಂಡ ಸೋವಿಯತ್ ರಷ್ಯಾ : ತನ್ನ ನೆರಳಲ್ಲಿ ಆಶ್ರಯ ಕಂಡುಕೊಳ್ಳಲು ಒಪ್ಪಿದ ಭಾರತದ ಜತೆ ಸ್ನೇಹ ಕಂಡುಕೊಂಡಿತು.

ತಾನು ನೀಡುತ್ತಿರುವ ಆಶ್ರಯಕ್ಕೆ ಪ್ರತಿಯಾಗಿ ಸೋವಿಯತ್ ರಷ್ಯಾ, ಭಾರತ ದಿಂದ ಏನನ್ನೂ ಪಡೆದುಕೊಳ್ಳುತ್ತಿಲ್ಲವೇ. ಭಾರತದ ಜನರನ್ನು ಸುಲಿಯುವ ವಿಚಾರ ದಲ್ಲಿ ಸೋವಿಯತ್ ರಷ್ಯಾ, ಅಮೇರಿಕಕ್ಕಿಂತ ಏನೂ ಕಡಿಮೆ ಇಲ್ಲ. ಬಹಳ ನಯ ವಾದ ರೀತೀಲಿ ಸುಲಿಗೆ ನಡೀತಾಬಂದಿದೆ. ಭಾರತ ಈವರೆಗೆ ಸುಮಾರು 400 ಕೋಟಿ ರೂ. ಗೂ ಹೆಚ್ಚು ಮೌಲ್ಯದ ವಸ್ತುಗಳನ್ನು ರಫ್ತು ಮಾಡಿದೆ. ಅದಕ್ಕೆ ಸೋವಿ ಯತ್ ರಷ್ಯಾ, ಒಂದು ನಯಾಪೈಸೆಯಷ್ಟು ಹಣ ನೀಡಿಲ್ಲ, ಹಣ ಬರೋದೂ ಇಲ್ಲ. ಒಂದು ರೀತೀಲಿ ಭಾರತ ಪುಗಸಟ್ಟೆ ಆ ವಸ್ತುಗಳನ್ನು ದಾನಮಾಡಿದಂತಾಗಿದೆ. ಉದಾಹರಣೆಗೆ, ಒಬ್ಬ ತೆರಿಗೆ ಅಧಿಕಾರಿ ಮಾರ ಕಟ್ಟೆಗೆ ಹೋಗಿ : ತನಗೆ ಬೇಕಾದ

ಸಾಮಾನುಗಳನ್ನು ಬೇಕಾದಾಗ ತುಂಬಿಸಿಕೊಂಡು ಬರೋದು ಅಂಗಡಿಯವರು ಅದರ ಲೆಕ್ಕಪತ್ರ ಇಡುವಂತಿಲ್ಲ. ಏಕೆಂದರೆ ಆ ಹಣ ವಾಪಸ್ಸು ಬರೋದಿಲ್ಲ. ಭಾರತದ ಪಾಲಿಗೆ ಸೋವಿಯತ್ ರಷ್ಯಾ, ಆ ರೀತಿಯ ತೆರಿಗೆ ಅಧಿಕಾರಿಯಾಗಿದೆ.

ಭಾರತದ ದುಡಿವ ವರ್ಗವಾದ ಕೆಳಜಾತಿ ಶೂದ್ರ ಸಮುದಾಯ ಕ್ರಾಂತಿ ಮೂಲಕ ಅಧಿಕಾರಕ್ಕೆ ಬಂದ ಗಳಿಗೆಯಲ್ಲೆ : 'ಡಕಾಯಿತರು ನೀವು' ಎಂದು ಲೆನಿನ್ ಬಂಡವಾಳಶಾಹಿಗಳ ಮುಖಕ್ಕೆ ಬಾರಿಸಿದಂತೆ. 'ನೀನು ಸಮಾಜವಾದಿ ಡಕಾಯಿತ' ಎಂದು ಸೋವಿಯತ್ ರಷ್ಯಾದ ಮೂತಿಗೆ ತಿವಿಯುತ್ತಾರೆ. ಚೀನಾ ಹಾಗೆ ಹೇಳಿದ್ದರಿಂದಲೇ, ಸೋವಿಯತ್ ರಷ್ಯಾ, ಚೀನಾದ ಜತೆ ಸಂಬಂಧ ಕಡಿದುಕೊಂಡಿತು. ಭಾರತವೂ ಆ ರೀತಿ ಹೇಳುವುದು, ಸೋವಿಯತ್ ಅಧಿಕಾರಿಶಾಹಿಗೆ ಬೇಕಿಲ್ಲ. ಅಂದರೆ ಭಾರತ ಈಗ ಹೇಗಿದೆಯೋ ಹಾಗೇ ಇರಬೇಕು.

'ಸ್ಟಾಲಿನ್ ಮಾತಿಗೆ ವಿರುದ್ಧವಾಗಿ ನಡೆದುಕೊಳ್ಳುವುದರ ಮೂಲಕ ಚೀನಾ ಕ್ರಾಂತಿ ಜಯಗಳಿಸಿತು. ಸ್ಟಾಲಿನ್ ವಿಧಾನವನ್ನೇ - ಅನುಸರಿಸಿದ್ದಲ್ಲಿ, ಚೀನಾ ಕ್ರಾಂತಿ ಜಯಗಳಿಸುತ್ತಿರಲಿಲ್ಲ' - ಎಂದು ಮಾವೋ A critique of Soviet Economics – Monthly review ಪ್ರಕಟಣೆ ಹೇಳಿರುವ ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಈ ಮಾತು ಈವತ್ತಿಗೂ ನಿಜ. ಪ್ರಪಂಚದ ಯಾವುದೇ ಒಂದು ದೇಶದಲ್ಲಿ ಆಗಬಹುದಾದ ನಿಜವಾದ ಕ್ರಾಂತಿಗೆ ಪ್ರಬಲ ವಿರೋಧಿ ಅಥವಾ ಅಡ್ಡಿ, ಸೋವಿಯತ್ ರಷ್ಯಾವೇ ಆಗಿದೆ. ಅಂತಹ ಸೋವಿಯತ್ ರಷ್ಯಾದ ಕೈಗೊಂಬೆಗಳಾದ ಕಮ್ಯೂನಿಸ್ಟ್ ಪಕ್ಷಗಳು, ಕ್ರಾಂತಿಗಾಗಿ ಹೋರಾಡುವುದು ಸಾಧ್ಯವೇ? ಖಂಡಿತ ಹೋರಾಡಲಾರರು. ಅದೇ ಪುಸ್ತಕದಲ್ಲಿ ಮುಂದುವರಿದು (ಪುಟ 37) ಮಾವೋ ಹೇಳುವಂತೆ ಭಾರತದ ಕಮ್ಯೂನಿಸ್ಟ್ ಪಕ್ಷ ಬೂರ್ಜ್ವಾ ಪ್ರಜಾಸತ್ತಾತ್ಮಕ ಕ್ರಾಂತಿಯಲ್ಲಿ - ಸ್ವಾತಂತ್ರ ಆಂದೋಳನ - ಸಕ್ರಿಯವಾಗಿ ಪಾಲುಗೊಳ್ಳಲಿಲ್ಲ. ಅಲ್ಲದೆ ಭಾರತದ ದುಡಿವ ಜನ ಪ್ರಜಾಸತ್ತಾತ್ಮಕ ಕ್ರಾಂತಿಯ ನಾಯಕತ್ವ ವಹಿಸಿಕೊಳ್ಳುವಂತೆ, ಸಾಧ್ಯ ಮಾಡಲಿಲ್ಲ. ಸ್ವಾತಂತ್ರಾನಂತರವೂ ಕೂಡ ಭಾರತದ ಕಮ್ಯೂನಿಸ್ಟ್ ಪಕ್ಷವು, ದುಡಿವ ಜನರ ಕಾರಣಗಳಿಗಾಗಿ ಗಟ್ಟಿಯಾಗಿ ನಿಲ್ಲಲಿಲ್ಲ'. ಭಾರತದ ಕಮ್ಯೂನಿಸ್ಟ್ ಪಕ್ಷಗಳು ಮತ್ತೊಂದು ರೀತೀಲಿ ಕಾಂಗ್ರೆಸ್ ಪಕ್ಷವೇ ಆಗಿವೆ ಎಂಬುದು ಮಾವೋ ಮಾತಿನ ಅರ್ಥವಾಗಿದೆ. ಈಗ ಆಗಿರುವುದು – ಅದೇ ತಾನೇ ?

ಹಾಗಾದರೆ ಭಾರತದ ಕಮ್ಯೂನಿಸ್ಟರು ಏನೂ ಸಾಧಿಸಿಲ್ಲವೇ ? ಎಂಬ ಅನುಮಾನ ಬರಬಹುದು. ಹೌದು; ಸಾಧಿಸಿದ್ದಾರೆ. ಅವರ ಒಂದೇ ಒಂದು ದೊಡ್ಡ ಸಾಧನೆ – ಭಾರತದ ವಿಭಜನೆಯನ್ನು ಸಮರ್ಥಿಸಿದ್ದು ! ಒಂದು ದೇಶದಲ್ಲಿ

ವಿಲೀನವಾಗುವ ಅಥವಾ ಪ್ರತ್ಯೇಕ ರಾಷ್ಟ್ರವಾಗಿ ಉಳಿದುಕೊಳ್ಳುವ, ವಿಚಾರವಾಗಿ ನಿರ್ಧಾರ ತೆಗೆದುಕೊಳ್ಳುವ 'ಸ್ವಯಂ ಪ್ರತಿಪಾದನೆಯ ಹಕ್ಕು' ಒಂದು ರಾಷ್ಟ್ರೀಯ ಜನರಿಗಿದೆ. ಎಂಬ ಸಿದ್ಧಾಂತ ನೀಡುವುದರ ಮೂಲಕ ಲೆನಿನ್, ಯೂರೋಪ್ ಮತ್ತು ಏಷ್ಯಾ ಖಂಡಗಳಲ್ಲಿ ಬರುವ 'ಅನೇಕ' ರಾಷ್ಟ್ರಗಳನ್ನು 'ಒಂದು ದೇಶ' ವನ್ನಾಗಿ ರೂಪಿಸಿದರು. ಆದರೆ 'ಒಂದು ದೇಶ' ವಾದ ಭಾರತವನ್ನು ಧರ್ಮದ ಹೆಸರಲ್ಲಿ ಬ್ರಿಟಿಷರು: ಭಾರತ ಮತ್ತು ಪಾಕಿಸ್ಥಾನ ಎಂದು ವಿಭಜಿಸಿದಾಗ, ಅದನ್ನು ಸಮರ್ಥಿಸಲು ಭಾರತದ ಕಮ್ಯೂನಿಸ್ಟರು ಬಳಸಿಕೊಂಡದ್ದು – ಸ್ವಯಂ ಪ್ರತಿಪಾದನೆಯ ಹಕ್ಕು ಎಂಬ ಲೆನಿನ್ ನೀಡಿದ ಅದೇ ಸಿದ್ಧಾಂತವನ್ನು !

ಇಂತಹ ಕಮ್ಯೂನಿಸ್ಟರು 'ಕ್ರಾಂತಿ' ಎಂಬ ಮಾತಿಗೆ ನೀಡಿರುವ ಅರ್ಥವೇ ಬೇರೆ ಬಗೆಯದು. ಅವರ ಪ್ರಕಾರ 'ಕ್ರಾಂತಿ' ಎಂದರೆ ಈಗ ಆಫ್ಘಾನಿಸ್ಥಾನದಲ್ಲಿ ನಡೆಯುತ್ತಿರುವ 'ಕ್ರಾಂತಿ'.

* * *

ಮಹಾದೇವ್, 'ಗಾಂಧೀ' ಚಿತ್ರದಲ್ಲಿ ಅಂಬೇಡ್ಕರ್ ಅವರನ್ನು ತರದೇ ಇದ್ದುದೇ ಚೆನ್ನಾಯಿತು ಎಂದು ನೀವೊಂದು ಕಡೆ ಸಮಾಧಾನ ತಂದುಕೊಂಡಿದ್ದೀರಿ. ಆದರೆ ಅದು ಅಷ್ಟು ಸರಿಯಲ್ಲ ನೋಡಿ. ದ್ವೇಷ ಬೇಕಾದರೆ ಸಹಿಸಿಕೋಬಹುದು ಉಪೇಕ್ಷೆಯನ್ನಲ್ಲ. ಗಂಭೀರವಾಗಿ ತೆಗೆದುಕೊಂಡಾಗ ಮಾತ್ರ ದ್ವೇಷ ಅಥವಾ ಪ್ರೀತಿ ಬರಲು ಸಾಧ್ಯ. ಅಸ್ತಿತ್ವವನ್ನೇ ಒಪ್ಪಿಕೊಳ್ಳಲು ನಿರಾಕರಿಸಿದಾಗ ಮಾತ್ರ ಉಪೇಕ್ಷೆ ಬರಬಲ್ಲದು. ಒಬ್ಬ ಮನುಷ್ಯನನ್ನು ಇತಿಹಾಸದ ಪುಟಗಳಿಂದಲೇ ವರೆಸಿಹಾಕಿ ಬಿಡುವ ಶಕ್ತಿ ಉಪೇಕ್ಷೆಗಿದೆ. ಸೋವಿಯತ್ ನಾಡಿನಲ್ಲಿ ಟ್ರಾಟ್‌ಸ್ಕಿ, ಬುಖಾರಿನ್ ಮತ್ತು ಯುಗೋಸ್ಲೋವಿಯಾದಲ್ಲಿ ಮಿಲೊವನ ದಿವಾಸೆಗೆ ನೆಲೆಯೇ ಇಲ್ಲ. ಅಲ್ಲಿ ಅವರುಗಳ ಹೆಸರನ್ನೂ ಹೇಳುವಂತಿಲ್ಲ. ಭಾರತದಲ್ಲಿ ಆ ಪ್ರಮಾಣದಲ್ಲಿ ನಡೀಲಾರದು. ಆದರೆ ಅಂತಾದ್ದೇ ಚಾತುರ್ಯ ಬೇರೆ ರೀತೀಲಿ ಕೆಲಸ ಮಾಡುತ್ತದೆ – ಉದಾಹರಣೆಗೆ (ಜೈನ ಧರ್ಮದಂತೆ) ಬ್ರಾಹ್ಮಣೀಕರಣಗೊಳ್ಳಲು ನಿರಾಕರಿಸಿದ ಬೌದ್ಧ ಧರ್ಮವನ್ನು, ಈ ದೇಶದಿಂದಲೇ ಓಡಿಸಲು ಅನುಸರಿಸಿದ ತಂತ್ರ. ಲೋಹಿಯಾಗೂ ಅದೇ ಗತಿ ಕಾದಿದೆ ಅನಿಸುತ್ತೆ.

'ಏಷ್ಯನ್ ಡ್ರಾಮಾ' ದಲ್ಲಿ ಭಾರತದ ಅನೇಕ ಆಂಗ್ಲ ಲೇಖಕರ ಹೆಸರು ಬರುತ್ತದೆ. ಹೊಟ್ಟೆಪಾಡು ಅಥವಾ ಪ್ರೊಫೆಸರ್‌ಗಾಗಿ - ಅಲ್ಲಿಂದ ಒಂಚೂರು ಇಲ್ಲಿಂದ ಒಂಚೂರು ಸೇರಿಸಿ - ಬರೆವ ಜನರ ಮಾತುಗಳನ್ನು ಅಲ್ಲಿ ಅನೇಕ ಕಡೆ ಉದಾಹರಿಸಲಾಗಿದೆ. ಆದರೆ ಗುನ್ನಾರ್ ಮಿರ್ಡಾಲ್ ಎಲ್ಲೂ, ಲೋಹಿಯಾನ ಹೆಸರೇ

ಎತ್ತೋದಿಲ್ಲ. ಲೋಹಿಯಾನ ಮಿರ್ಡಾಲ್ ಉದಾಹರಿಸಿದರೆಷ್ಟು ಬಿಟ್ಟರೆಷ್ಟು, ಅದರಿಂದ ಏನೂ ಲೋಹಿಯಾ ದೊಡ್ಡೋನಾಗೋದಿಲ್ಲ ಅಥವಾ ಸಣ್ಣೋನಾಗೋದಿಲ್ಲ, ಎಂದು ಮೇಲ್ನೋಟಕ್ಕೆ ಅನ್ನಿಸಬಹುದು. ಆ ಮಾತು ನಿಜವೂ ಹೌದು. ಆದರೆ ಆ ಹಿಂದೆ ಕೆಲವು ಕ್ರೂರಸತ್ಯಗಳು ಅಡಗಿದ್ದು, ಆ ಸಂಗತಿಯನ್ನು ಸುಲಭವಾಗಿ ತಳ್ಳಿಹಾಕಲಾಗುವುದಿಲ್ಲ.

ಡಾ. ಲೋಹಿಯಾ ಮಿರ್ಡಾಲ್ ಗಮನಕ್ಕೆ ಬಂದಿಲ್ಲದಿರಬಹುದು. ತನ್ನ ಚಿಂತನ ಕ್ರಮಕ್ಕೆ ಸಂಗತ ಅಲ್ಲ ಎಂದು ಅನ್ನಿಸಿರಬಹುದು ಅಥವಾ ಉಲ್ಲೇಖಿಸ ಬಹುದಾದಷ್ಟು ಪ್ರಮುಖನಾಗಿ ಲೋಹಿಯಾ, ಮಿರ್ಡಾಲ್ ಕಣ್ಣಿಗೆ ಕಾಣಿಸಿಲ್ಲದಿರ ಬಹುದು ಎಂಬ ಒಂದು ಸಮಜಾಯಿಷಿ ವಾದವನ್ನು ನೀಡಬಹುದಾದರೂ, ಅದಷ್ಟು ಸೂಕ್ತವಾಗುವುದಿಲ್ಲ. ಆ ರೀತಿಯ ಉಪೇಕ್ಷೆಗೆ ಎರಡು ರೀತಿಯ ಅಂಶಗಳು ಕಾರಣ ವಾಗಿರಬಹುದು. ಮಿರ್ಡಾಲ್, ಲೋಹಿಯಾನಿಂದ ಬಹಳಮಟ್ಟಿಗೆ ಪ್ರಭಾವಿತ ನಾಗಿರುವಂತೆ ತೋರುತ್ತದೆ. ಹಾಗಾಗಿ ಆತ ಎಲ್ಲೂ ಲೋಹಿಯಾನ ಹೆಸರನ್ನು ಎತ್ತದಿರಬಹುದು. ಎರಡನೇಯದು, ಆ ಹಿಂದೆ ಇರಬಹುದಾದ ನೆಹರೂ ವಂಶದ ಕೈವಾಡ.

ಬ್ಯಾಂಕ್ ರಾಷ್ಟ್ರೀಕರಣ, ಉಳುವವನೇ ನೆಲದೊಡೆಯ ಇತ್ಯಾದಿ ಸಮಾಜ ವಾದಿ ಘೋಷಣೆಗಳನ್ನು ಕದಿಯುವುದರ ಮೂಲಕ, ಸಮಾಜವಾದಿ ಸಂಘಟನೆ ಯನ್ನು ಮುರಿದು ಹಾಕಲಾಯಿತು ಮತ್ತು ಸಮಾಜವಾದಿ ನಾಯಕರನ್ನು ಕಾಂಗ್ರೆಸ್ಸೀ ಕರಣಗೊಳಿಸಲಾಯಿತು. ಮುಂದೇನು ?

ಜನತೆಯನ್ನು ನಿರಂತರ ವಂಚಿಸುವುದು ಸಾಧ್ಯವಿಲ್ಲ. ಕೆಂಗಲ್ ಹನುಮಂತಯ್ಯ, ಎಸ್. ನಿಜಲಿಂಗಪ್ಪ, ಕಡಿದಾಳ್ ಮಂಜಪ್ಪ ಮುಂತಾದ ದ್ರಾಬೆಗಳ ನಡುವೆ, ದೇವರಾಜ ಅರಸು 'ನಕ್ಷತ್ರ' ಅಂದುಕೊಳ್ಳಬಹುದಾದರೂ ಆತ ತಂದ ಭೂಸುಧಾರಣೆ ನಿಜವಾಗಲೂ ಸಮಾಜವಾದೀಯವಾಗಿದೆಯೆ ! ಕೆಲವಾದರೂ ಸಮಸ್ಯೆಗಳಿಗೆ ಪರಿಹಾರ ನೀಡಲು ಆತ ನಡೆಸಿದ ಯತ್ನ, ನಿಜವಾಗಲೂ ಯಶಸ್ವಿಯಾಗಿದೆಯೇ ? ಇಲ್ಲ. ಆಗಲು ಸಾಧ್ಯವೂ ಇಲ್ಲ. ಸಮಾಜವಾದಿ ಸಂಘಟನೆ ಮತ್ತು ಹೋರಾಟದ ಮೂಲಕ ದೇವರಾಜ ಅರಸು ಅಧಿಕಾರಕ್ಕೆ ಬಂದಿದ್ದಲ್ಲ. ಆಗ ಆತ ರೂಪಿಸುತ್ತಿದ್ದ ಭೂ ಸುಧಾರಣೆ ಕಾನೂನು, ಬೇರೆ ರೀತೀಲಿ ಇರುತ್ತಿತ್ತು. ಆದ್ದರಿಂದ ಅರಸು 'ತಂದ' ಕಾರ್ಯಕ್ರಮಗಳಲ್ಲಿ ಹಲವಾರು ವಿಕೃತಿಗಳು, ಹಸಿಹಸಿಯಾಗಿಯೇ ಉಳಿದುಕೊಂಡಿವೆ. ಕಾಂಗ್ರೆಸ್‌ನ ಎಲ್ಲಾ ಕಾರ್ಯಕ್ರಮಗಳು ಕಣ್ಣೊರೆಸುವ ಹುಸಿ ನಾಟಕಗಳು. ಆ ಮೂಲಕ ಆಳುವ ವರ್ಗದ ಜನ ಮತ್ತಷ್ಟು ಬಲಿಷ್ಟರಾದರು. ಅದು ಏನಃ

ಮತ್ತೇನೂ ಆಗಲಿಲ್ಲ. ಎಂಬ ಸತ್ಯ ಜನತೆಗೆ ತಡವಾಗಿಯಾದರೂ ಮನವರಿಕೆಯಾಗುವುದು ಖಂಡಿತ. ಆಗ ಅದೇ ಲೋಹಿಯಾ ಚಿಂತನೆ, ಮುಂದಿನ ಸಂಘಟನೆಗೆ ದಾರಿಯಾಗುವುದಿಲ್ಲ ಎನ್ನುವುದು ಯಾವ ಗ್ಯಾರಂಟಿ!

ಕಾಂಗ್ರೆಸ್ ಜನರು ಮಾಡಿದ ಮಹಾವಂಚನೆಯ ಬಣ್ಣ ಬಯಲಾದ ನಂತರ ಉಂಟಾದ ಹೊಸ ಅರಿವಿನಿಂದಾಗಿ ಜನರು: ಸ್ವಾಭಾವಿಕವಾಗಿಯೇ ಲೋಹಿಯಾ ಚಿಂತನೆಗೆ ಮರಳಿ ಬರುವುದು ಸಹಜ. ಬೆಳವಣಿಗೆ ಆಗುತ್ತಿತ್ತು. ಆ ರೀತಿಯ ಅನುಭವದಿಂದಾಗಿ ಸಮಾಜವಾದಿ ಕಲ್ಪನೆ ಮತ್ತಷ್ಟು ಪಕ್ವವಾಗುತ್ತಿತ್ತು. ಕಾಂಗ್ರೆಸ್‌ನ ಕುತಂತ್ರದಿಂದಾಗಿ ಗ್ರಹಣ ಹಿಡಿದಂತಿದ್ದ ಲೋಹಿಯಾವಾದಿ ಸಮಾಜವಾದಿ ಸಂಘಟನೆಗೆ, ಹೊಸ ಜೀವ ಬರುತ್ತಿತ್ತು. ಏಕೆಂದರೆ ಬೌದ್ಧಧರ್ಮವನ್ನು ಓಡಿಸಿದವರು: ಆದರೆ ಬುದ್ಧನ ಚಿಂತನೆಯನ್ನು ಓಡಿಸಲಾಗಲಿಲ್ಲ ಅಥವಾ ಅವನನ್ನು ಅಳಿಸಿಹಾಕಲಾಗಲಿಲ್ಲ. ಲೋಹಿಯಾವಾದಿಗಳನ್ನು ಕಾಂಗ್ರೆಸ್ಸೀಕರಣಗೊಳಿಸುವುದರ ಮೂಲಕ ಸಂಘಟನೆಯನ್ನು ಕೊಲ್ಲಲಾಯಿತು. ಆದರೆ ಲೋಹಿಯಾ ಚಿಂತನೆಯನ್ನು ಕಾಂಗ್ರೆಸ್ಸೀಕರಣಗೊಳಿಸಲಾಗಲಿಲ್ಲವಲ್ಲ!

ಆದ್ದರಿಂದ ಲೋಹಿಯಾನನ್ನು ಕೊಂದುಹಾಕಲು ಕಾಂಗ್ರೆಸ್ ಮಂದಿ, ಎರಡು ಹಂತದ ಕುತಂತ್ರ ಅನುಸರಿಸಿದರು: ಒಂದು ಸಂಘಟನೆ ರೂಪದಲ್ಲಿ, ಮತ್ತೊಂದು ಚಿಂತನೆಗೂಪದಲ್ಲಿ. ಮೊದಲ ಹಂತದ ಕೊಲೆ ಘೋಷಣೆಗಳನ್ನು ಕದಿಯುವುದರ ರೂಪದಲ್ಲಿ ನಡೆದರೆ: ಎರಡನೇದಕ್ಕಾಗಿ. ಮಿರ್ಡಾಲ್‌ನನ್ನು ಚಾಲುಮಾಡಿದರು ಅಥವಾ ಮಿರ್ಡಾಲ್ ಬಳಕೆಯಾದ ರೀತಿ ಅದು ಕೊಲೆಯಾದ ನಂತರ ಸಮಾಜವಾದಿ ಕನಸು ಮತ್ತೆ ಬೇರೆ ರೂಪದಲ್ಲಿ ಹುಟ್ಟುದಂತೆ ನೋಡಿಕೊಳ್ಳುವುದು ಅಥವಾ ಅದನ್ನು ಆದಷ್ಟು ವಿರೂಪಗೊಳಿಸುವುದು ನೆಹರೂ ವಂಶದ ಉದ್ದೇಶವಾಗಿತ್ತು. ಸಹಜವಾಗಿಯೇ ಲೋಹಿಯಾಗೆ ಎಂದೂ ದೊರೆಯದಿದ್ದ ಸಂಭ್ರಮದ ಸ್ವಾಗತ, ಮಿರ್ಡಾಲ್‌ಗೆ ದೊರೆಯಿತು.

* * *

ಈವತ್ತಿನ–ಅಂದರೆ ಅಧ್ಯಯನ ಕಾಲದ—ಭಾರತದ ಸ್ಥಿತಿ: ಅದಕ್ಕೆ ಯಾರ್ಯಾರು ಯಾವುದು, ಎಷ್ಟರ ಮಟ್ಟಿಗೆ ಕಾರಣ; ಅಮೇರಿಕ, ಬ್ರಿಟನ್ ಇತ್ಯಾದಿ ಸಾಮ್ರಾಜ್ಯಶಾಹಿ ಶಕ್ತಿಗಳು ಮತ್ತು ಭಾರತದ ಒಳಗೇ ಇರುವ ಪಾಮಿಲುದಾರರ ಪಾತ್ರ–ಜಿಗಣೆಯಂತೆ ಸಿಂಹಾಸನಕ್ಕೆ ಅಂಟಿಕೊಂಡಿರುವ ಕಾಂಗ್ರೆಸ್—ನೆಹರೂ ವಂಶ—ಏನು ಮಾಡಿದೆ, ಎಂದು ಸಮಸ್ಯೆಯ ಹುತ್ತಕ್ಕೆ ನೇರ ಕೈಹಾಕುವುದು ಮೊದಲನೇ ಹಂತ. ಯಾವ ಔಷಧಿ ತೆಗೆದುಕೊಂಡರೆ ಅಥವಾ ಏನು ಮಾಡಿದರೆ ಸರಿಹೋಗುತ್ತದೆ

ಎಂಬುದು, ಮುಂದಿನ ಪ್ರಶ್ನೆ. ಯಾವನೇ ಒಬ್ಬ ಸಾಮಾಜಿಕ ಅರ್ಥಶಾಸ್ತ್ರಜ್ಞ ಹಿಡಿಯಬಹುದಾದ ದಾರಿ ಅದು.

ಮಿರ್ಡಾಲ್ ಆ ದಾರಿ ಹಿಡಿಯುವುದೇ ಇಲ್ಲ. ಎರಡನೇದಾಗಿ ಆ ಹೊರಗಿನ ಶಕ್ತಿಗಳ ಬಗ್ಗೆ ಆತ ಮಾತಾಡುವುದೇ ಇಲ್ಲ, ಎರಡನೇದಾಗಿ ಆ ಹೊರಗಿನ ದರೋಡೆಕಾರರ ಜತೆ ಷಾಮೀಲಾಗಿರುವ ದೇಶದ ಒಳಗಿನ ತಲೆಹಿಡುಕರನ್ನು ಆತ ಗುರುತಿಸಲಿಲ್ಲ. ಚರ್ಮರೋಗದ ಬಗ್ಗೆ ಮಾತಾಡುತ್ತಾನೆ. ಆದರೆ ಹೃದಯದ ಸುತ್ತ ಜಡಿ ಬಿದ್ದಿರುವ ಆಕ್ಟೋಪಸ್ ಕಾಯಿಲೆಗಳ ಜಾಡು ಹಿಡಿಯಲು ಆತ ಸ್ವೆತಾಸ್ಕೋಪನ್ನು ಬಳಸುವುದೇ ಇಲ್ಲ. ಹಾಗಾಗಿ 'ಏಷ್ಯನ್ ಡ್ರಾಮಾ' ಎಂಬುದೊಂದು ತೇಪೆದಾರಿ ಕೆಲಸ.

ಸಮಸ್ಯೆಗಳನ್ನು ಬುಡಮಟ್ಟ ಜಾಲಾಡುವುದು ಮಿರ್ಡಾಲ್‌ನ ಉದ್ದೇಶವಾಗಿದ್ದಲ್ಲಿ ನೆಹರೂ ವಂಶವ ತರಾಟೆಗೆ ತೆಗೆದುಕೊಳ್ಳುವ ಪ್ರಮೇಯ ಎದುರಾಗುತ್ತಿತ್ತು, ಅಂದರೆ ಲೋಹಿಯಾನ ಪ್ರಸ್ತಾಪಿಸಬೇಕಾಗುತ್ತಿತ್ತು. ಜೆ.ಪಿ. ವಿನೋಬಾನ ಜಟಕಾ ಗಾಡೀಲಿ ಹೋಗುತ್ತಿದ್ದಾಗ; ಕಮುನಿಸ್ಟರು ನೆಹರೂನ ಬಾಲಬಡುಕರಾಗಿದ್ದಾಗ; ಬೇರೆ ದಾರಿ ಇದೆ ನೋಡಿ. ಎಂದು ದನಿ ಎತ್ತರಿಸಿ ಕೂಗಿದವರು ಲೋಹಿಯಾ ಮಾತ್ರ ಆಗಿದ್ದರು. ಮಿರ್ಡಾಲ್‌ಗೆ ಅದು ಬೇಕಿರಲಿಲ್ಲ. ಒಟ್ಟಾರೆ ನೆಹರೂ ವಂಶದ ನೀತಿ ಸರಿದಾರಿಯಲ್ಲಿ ಹೋಗುತ್ತಿದೆ. ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡರೆ ಸಾಕು ಭಾರತ ಸಮಾಜವಾದಿ ರಾಷ್ಟ್ರವಾಗುತ್ತದೆ. ಎಂಬ ದನಿ ಮಿರ್ಡಾಲನದು. ಆ ಕಾರಣವೇ ಮಿರ್ಡಾಲ್ ಲೋಹಿಯಾನ ಉದಾಹರಿಸದಿರಬಹುದು.

ಲೋಹಿಯಾವಾದಿಗಳು ದೊಡ್ಡದನಿ ತೆಗೆದು ಸ್ವಾಗತಿಸಿದರು. 'ಏಷ್ಯನ್ ಡ್ರಾಮಾ' ಕೇಂದ್ರ ಬಿಂದುವಾಯಿತು. ನೆಹರೂ ವಂಶ ಮತ್ತು ಮೇಲ್ಜಾತಿ ಶೂದ್ರರು ಅಲ್ಲಿ ಪರಸ್ಪರ ಸಂಧಿಸಿದರು. ಅನಂತರ ಸಮಾಜವಾದ ಕುರಿತು ನೆಹರೂ ಮತ್ತು ಲೋಹಿಯಾ ನಡುವೆ ಇದ್ದ ಅಗಾಧ ವ್ಯತ್ಯಾಸ, ಜನರಿಗೆ ಅರ್ಥರಹಿತವಾಗಿ ಕಂಡಿರಬೇಕು. ಅಥವಾ ಅದು ಅಷ್ಟು ಮುಖ್ಯವಲ್ಲ ಅನ್ನಿಸಿರಬೇಕು. ನೆಹರೂ ಬ್ರಾಂಡ್ ಸಮಾಜವನ್ನು ಪ್ರಶ್ನಿಸುವವರೇ ಇಲ್ಲವಾದರು. ಕ್ರಮಕ್ರಮವಾಗಿ ಲೋಹಿಯಾ ಜನತೆಯ ಕಣ್ಣಿನಿಂದ ಮರೆಯಾಗಲು ಇದು ಒಂದು ಕಾರಣವಿರಬೇಕು. ಇಂದಿರಾ ಗಾಂಧಿ, ಗುನ್ನಾರ್ ಮಿರ್ಡಾಲ್ ಮತ್ತು ಆತನ ಹೆಂಡತಿಗೆ ನೆಹರೂ ಪ್ರಶಸ್ತಿ ನೀಡಿದ್ದು ಮತ್ಯಾಕೆ ಅಂದುಕೊಂಡಿದ್ದೀರಿ?

ತನ್ನ ಬೆನ್ನ ಹಿಂದೆ, ಇಷ್ಟೆಲ್ಲ ಕುತಂತ್ರಗಳು ಕೆಲಸ ಮಾಡುತ್ತಿವೆ ಎಂಬುದು ಮಿರ್ಡಾಲ್ ಅರಿವಿಗೆ ಬಂದಿಲ್ಲದೇ ಹೋಗಿರಬಹುದು. ಆತ ನಿಜವಾಗಲೂ ಕಳಕಳಿಯಿಂದ ಭಾರತಕ್ಕೆ ಬಂದದ್ದಿರಬಹುದು. ಭಾರತಕ್ಕೆ ಅಧ್ಯಯನ ಮಾಡಲು ಬರುವ

ವಿದೇಶಿಯರು 'ನೇಟಿವ್'ಗಳನ್ನು ಅವಲಂಬಿಸಬೇಕಾಗುತ್ತದೆ. ಆ 'ನೇಟಿವ್' ಬ್ರಾಹ್ಮಣಾ ತಾನೇ! 'ಗಾಂಧೀ' ತೆಗೆದ ರಿಚರ್ಡ್ ಅಟೆನ್ ಬರೋ ಕೂಡ ಇದೇ ರೀತಿ ಅಂಬೇಡ್ಕರ್ ವಿಚಾರದಲ್ಲಿ ದಾರಿ ತಪ್ಪಿರಬಹುದು!

* * *

ದುಡಿವ ಜನರ ಪರವಾದ ತತ್ವ ಮತ್ತು ಅವರ ಕಾರಣಗಳಿಗೆ ಬದ್ಧರಾದ ಯಾರಾದರೂ, ದುಡಿವ ವರ್ಗದ ಜನರ ಸಂಘಟನೆ ಸೇರಬಹುದು ಎಂಬುದು ಕಮ್ಯೂನಿಸ್ಟ ಚಳವಳಿಯ ಮೂಲ ತತ್ವ, ಅದೇ ರೀತಿ ಸಮಾಜವಾದಿ ಚಿಂತನೆಗೆ ಬದ್ಧರಾದ ಯಾರು ಬೇಕಾದರೂ, ಸಮಾಜವಾದಿ ಆಂದೋಳನದಲ್ಲಿ ದುಮುಕಬಹುದು. ಒಂದು ಸಂಘಟನೆ ದುಡಿವ ವರ್ಗದ ಜನರ ಸಂಘಟನೆಯಾಗಬೇಕಾದರೆ: ದುಡಿವ ಜನರು ತುಂಬಾ ದೊಡ್ಡ ಪ್ರಮಾಣದಲ್ಲಿ ಸೇರಿರಬೇಕು; ಎಂದು ಅದೇ ಕಮ್ಯುನಿಸ್ಟ್ ತತ್ವ ಹೇಳುತ್ತದೆ. ಆ ಮಾತು ಸಮಾಜವಾದಿ ಸಂಘಟನೆಗೂ ಅನ್ವಯವಾಗುತ್ತದೆ. ಆದರೆ ಈ ದೇಶದಲ್ಲಿ ಆ ತತ್ವ ತಿರುಗಮುರುಗ ಆಯಿತು. ದುಡಿವ ಜನ—ಅಂದರೆ ಕೆಳಜಾತಿ ಶೂದ್ರ ಸಮುದಾಯ—ಸೇರಲೇ ಇಲ್ಲ: ಒಂದು ಕಮ್ಯುನಿಸ್ಟ್ ಪಕ್ಷವಾಯಿತು ಮತ್ತೊಂದು ಸಮಾಜವಾದಿ ಪಕ್ಷವಾಯಿತು.

ಪ್ರಖ್ಯಾತ ಮಾರ್ಕ್ಸ್‌ವಾದಿ ಅರ್ಥಶಾಸ್ತ್ರಜ್ಞ ಮತ್ತು ಪಶ್ಚಿಮ ಬಂಗಾಳದ ಹಣಕಾಸು ಸಚಿವ ಡಾ. ಅಶೋಕ ಮಿತ್ರ (Calcutta Dairy) ಅವರ ಮಾತನ್ನು ಇದೇ ಸಂದರ್ಭದಲ್ಲಿ ಉಲ್ಲೇಖಿಸುವುದು ಸೂಕ್ತ. ಯಾವುದೇ ಕಮ್ಯೂನಿಸ್ಟ್ ಪಕ್ಷ ತೆಗೆದುಕೊಳ್ಳಿ. ಅಲ್ಲೆಲ್ಲ ಬ್ರಾಹ್ಮಣರು ಮತ್ತು ಮೇಲ್ಜಾತಿ ಶೂದ್ರರೇ ತುಂಬಿಕೊಂಡಿದಾರೆ. ಅವರೆಲ್ಲ ಸಾಮಾನ್ಯವಾಗಿ ಪಾಳೇಗಿರಿ ಮನೆತನಗಳಿಂದ ಬಂದವರಾದುದರಿಂದ ಪಕ್ಷದ ಒಳಗೂ ಪಾಳೇಗಾರರಂತೆಯೇ ವರ್ತಿಸುತ್ತಾರೆ ಹಾಗಾಗಿ ವೈಯಕ್ತಿಕ ಆಸೆ-ಆಕಾಂಕ್ಷೆಗಳಿಗೆಲ್ಲ ಸಿದ್ಧಾಂತದ ಬಣ್ಣ ಕೊಟ್ಟು ಅವರು ಸಂಘಟನೆ ಮುರೀತಾರೆ. ದುಡಿವ ವರ್ಗದ ಜನರು—ಅಂದರೆ ಕೆಳಜಾತಿ ಶೂದ್ರರು—ದೊಡ್ಡ ಪ್ರಮಾಣದಲ್ಲೂ ಕೊಮ್ಯೂನಿಸ್ಟ್ ಪಕ್ಷಗಳಿಗೆ ಸೇರಿಕೊಂಡಿದ್ದಲ್ಲಿ, ಈವತ್ತು ಇರುವಂತಹ ಬುಡುಬುಡಿಕೆ ಪರಿಸ್ಥಿತಿ ಉಂಟಾಗುತ್ತಿರಲಿಲ್ಲ ಎಂಬುದು ಮಿತ್ರ ಅವರ ತಿಳುವಳಿಕೆ. ಆ ಮಾತು ಲೋಹಿಯಾವಾದಿ ಸಮಾಜವಾದಿ ಸಂಘಟನೆಗೂ ಅನ್ವಯವಾಗುತ್ತದೆ,

ಭೂಮಿ ಮೇಲಿನ ಒಡೆತನದಿಂದಾಗಿ ಪ್ರಬಲರಾಗಿದ್ದರೂ, ಆ ಭೂಮಿ ಕಾರಣವೇ ಮೇಲ್ಜಾತಿ ಶೂದ್ರರು : ಆರ್ಥಿಕ ಮತ್ತು ಸಾಂಸ್ಕೃತಿಕ ಸುಲಿಗೆಗೆ ಒಳಗಾಗಿದ್ದಾರೆ ಎಂಬುದು ಸಂಗತಿಯನ್ನು ಗಮನಿಸಿದ್ದು, ಲೋಹಿಯಾ ಚಿಂತನೆಯ ದೊಡ್ಡತನವೂ ಹೌದು. ಅದೇ ಅದರ ದೌರ್ಬಲ್ಯವೂ ಆಯಿತು. ಸಯ್ಯಾಜಿರಾವ್ ರಸ್ತೆಯ

ಮಧ್ಯದಲ್ಲಿ ಹೋಗುವ ನಾಯಕನ ಗುಂಪಿನಲ್ಲಿ ಬಲಗಡೆ ಇರುವವರು ಭಾವನಾತ್ಮಕ ವಾಗಿ, ರಸ್ತೆಯ ಬಲಬದಿಯಲ್ಲಿ ಹೋಗುತ್ತಿರುವ ಜನರಿಗೆ ಹತ್ತಿರದವರಾಗಿರುತ್ತಾರೆ. ಹಾಗಾಗಿ ಚಳವಳಿಯ ಲಾಭಪಡೆದುಕೊಂಡಂತೆಲ್ಲ ಲೋಹಿಯಾ ಬಲಭಾಗದಲ್ಲಿದ್ದ ಮೇಲ್ಜಾತಿ ಶೂದ್ರರು, ರಸ್ತೆಯ ಬಲಬದಿಯಲ್ಲಿ ಹೋಗುತ್ತಿದ್ದ ಕಾಂಗ್ರೆಸ್‌ನಲ್ಲಿ ವಿಲೀನರಾದರು. ಆ ರೀತಿಯ ವಿರುದ್ಧ ಬೆಳವಣಿಗೆಯನ್ನು ಲೋಹಿಯಾ ಬಹು ಪಾಲು ನಿರೀಕ್ಷಿಸಿರಲಾರರು.

ದುಡಿವ ಜನರು ಮಾತ್ರವೇ ಕ್ರಾಂತಿ ತರಬಲ್ಲರು ಅವರೇ, ನವಸಮಾಜದ ಶಿಲ್ಪಿಗಳು ಎಂಬುದು ಮಾರ್ಕ್ಸ್‌ವಾದದ ಮೂಲಭೂತ ತತ್ವಗಳಲ್ಲಿ ಒಂದು. ಆ ತತ್ವದ ಹೆಸರು ಹೇಳಿಕೊಂಡಾದರೂ ಮಾರ್ಕ್ಸ್‌ವಾದಿ ಸಂಘಟನೆ ಭಾರತದಲ್ಲಿ ಹಾರಾಡಿ ಕೊಂಡಾದರೂ ನಿಂತಿದೆ. ಮೇಲ್ಜಾತಿ ಶೂದ್ರರಂತಹ ಆಸ್ತಿವಂತ ವರ್ಗ: ಅರೆ ಕ್ರಾಂತಿಕಾರಿಗಳು ಮತ್ತು ಆನಂತರದಲ್ಲಿ ಕ್ರಾಂತಿವಿರೋಧಿಗಳೂ ಆಗುವ ಗುಣ ಪಡೆದಿ ರುವ ಕಾರಣ, ಅವರು ಕ್ರಾಂತಿ ಮಾಡಲಾರರು ಎಂಬುದು ಮಾರ್ಕ್ಸ್‌ನ ಖಚಿತ ನಿಲುವು. ಲೋಹಿಯಾ ಚಿಂತನೆ ಮತ್ತು ಸಂಘಟನೆಗೆ ಹೆಗಲು ನೀಡಿದವರು, ಮಾರ್ಕ್ಸ್ ಹೇಳಿದ ಆ ಅರೆ ಕ್ರಾಂತಿಕಾರಿ ಜನ. ಏನು ಆಗಬೇಕೋ ಅದೇ ಆಯಿತು. ಮಧ್ಯಮ ವರ್ಗದ ಜನ ಕ್ರಾಂತಿ ಮಾಡುವುದು ಸಾಧ್ಯವಿಲ್ಲ ಎಂಬ ಮಾರ್ಕ್ಸ್‌ನ ಚಿಂತನೆ, ವೈಜ್ಞಾನಿಕ ಸತ್ಯವಾಗಿದೆ ಎಂದು ರುಜುವಾತು ಪಡಿಸಿದ ಕೀರ್ತಿ, ಭಾರತದ ಲೋಹಿಯಾವಾದಿಗಳಿಗೆ ಸಲ್ಲಬೇಕು.

ರಸ್ತೆಯ ಎಡಭಾಗದಲ್ಲಿ ಹೋಗುತ್ತಿರುವ ವ್ಯಕ್ತಿ ತುಂಬ ಕಷ್ಟದ ದಿನಗಳಲ್ಲಿ, ಸಂದುಗೊಂದುಗಳಲ್ಲಿ ತಲೆಮರೆಸಿಕೊಳ್ಳಲು ಅವಕಾಶವಿದೆ. ಆದರೆ ರಸ್ತೆಯ ಮಧ್ಯ ಭಾಗದಲ್ಲಿ ಸಿಕ್ಕಿಕೊಂಡವ ಏನೂ ಮಾಡಲಾರ. ಬಯಲಲ್ಲಿ ಓಡಾಡಬಯಸಿದ ಮೊದಲ ಹಾಗೆ ಅವನ ಬದುಕು ಬಟ್ಟಬಯಲು, ಲೋಹಿಯಾ ಸಂಘಟನೆ ಆ ರೀತಿ ಕಣ್ಮರೆಯಾಯಿತು.

* * *

ಸಾಮಾನ್ಯವಾಗಿ ಯಾವುದೇ ಪಠ್ಯಪುಸ್ತಕ ತೆಗೆದುಕೊಳ್ಳಿ. ಶಂಕರಾಚಾರ್ಯನ ಬಗ್ಗೆ ಪುಟಗಟ್ಟಲೆ ಬರೆಯಲಾಗಿರುತ್ತದೆ. ಆದರೆ ಅಲ್ಲೆಲ್ಲೂ ಲೋಹಿಯಾನ ಹೆಸರು ನಮೂದಿತವಾಗಿರುವುದಿಲ್ಲ. ಪತ್ರಿಕೆಗಳು ಅಷ್ಟೆ. ಗಾಂಧೀ ಮತ್ತು ಮಾರ್ಕ್ಸ್ ಕುರಿತಂತೆ ವರ್ಷದಲ್ಲಿ ಎರಡು ಬಾರಿಯಾದರೂ – ಸತ್ತ ಮತ್ತು ಹುಟ್ಟಿದ ದಿನ ಭಜನೆ ಮಾಡುತ್ತವೆ. ಲೋಹಿಯಾ ಬಗ್ಗೆ ಸೊಲ್ಲೇ ಇರೋದಿಲ್ಲ. ಆತನ ಬಗ್ಗೆ

ಯಾಕೆ ಇಷ್ಟೊಂದು ಅನಾದರ ಅಥವಾ ನಿರ್ಲಕ್ಷ್ಯ ? 'ಆಧುನಿಕ ಮನು' ಎಂದು ಕರೆಯುವುದರ ಮೂಲಕ ಬ್ರಾಹ್ಮಣರು, ಅಂಬೇಡ್ಕರ್ ವಿರುದ್ಧ ಸೇಡು ತೀರಿಸಿ ಕೊಂಡರು. ಮನುವಿನಷ್ಟು ಕೊಳಕು ಮನಸ್ಸಿನ ಮಾನವ ಜನಾಂಗ ದ್ವೇಷಿ, ಇತಿಹಾಸದಲ್ಲಿ ಮತ್ತೊಬ್ಬ ಇರಲಾರ. ಅಂಬೇಡ್ಕರ್‌ಗೆ ದೊರೆತ ಆ ರೀತಿಯ ಸ್ವಾಗತಕ್ಕಿಂತ, ಲೋಹಿಯಾಗೆ ನೀಡಲಾದ ಈ ರೀತಿಯ ಪುರಸ್ಕಾರ ಸಹನೀಯ. ಲೋಹಿಯಾ ಈ ದೇಶದವನಲ್ಲವೇ ? ಈ ತನ್ನ ದೇಶಕ್ಕಾಗಿ, ತನ್ನ ಜನರಿಗಾಗಿ ಆತ ಏನನ್ನೂ ಮಾಡಿಲ್ಲವೇ ?

ಆದರಲ್ಲಿ ವಿಶೇಷ ಏನೂ ಇಲ್ಲ. ಇತಿಹಾಸದಲ್ಲಿ ಈ ತರಹದವು ಮಾಮೂಲಿ ಸಂಗತಿಗಳಾಗಿವೆ. ಬುದ್ಧ ಮತ್ತು ಬೌದ್ಧಧರ್ಮಕ್ಕೆ ಸಂಬಂಧಿಸಿದ ಯಾವುದೇ ದಾಖಲೆಗಳನ್ನು, ಭೂಮಿಯ ಮೇಲೆ 'ಇರಲು ಅವಕಾಶವಿಲ್ಲದಂತೆ' ವ್ಯವಸ್ಥಿತವಾಗಿ ನಿರ್ನಾಮಮಾಡಲಾಯಿತು. ಕಾಡಿನ ಮಧ್ಯೆ ತಲೆಮರೆಸಿಕೊಂಡಿದ್ದ ಅಜಂತ ಗುಹೆ ಗಳಂತಹ ಕೆಲವನ್ನು, ಏನೂ ಮಾಡಲಾಗಲಿಲ್ಲ ಎಂದು ತೋರುತ್ತದೆ. ಹಾಗಾಗಿ ಅಕಸ್ಮಾತ್ ಉಳಿದು ಬಂದವು ಕ್ರಿಸ್ತನ ತಮ್ಮನ ಬಗ್ಗೆ ಯಾವುದೇ ದಾಖಲೆಗಳಲ್ಲಿ. ಟ್ರಾಟ್‌ಸ್ಕಿ ಮತ್ತು ಬುಖಾರಿನ್ ಎಲ್ಲಿ ಅಧಿಕಾರಕ್ಕೆ ಬಂದುಬಿಡುತ್ತಾರೋ ಎಂಬ ಹೆದರಿಕೆಯಿಂದಲೇ ಸ್ಟಾಲಿನ್, ಅವರನ್ನು ಇಲ್ಲದಂತೆ ಮಾಡಲು ಎಲ್ಲ ಕುಯುಕ್ತಿ ಮತ್ತು ಕುತಂತ್ರಗಳನ್ನು ಬಳಸಿದ. ಟ್ರಾಟ್‌ಸ್ಕಿ ಮತ್ತು ಬುಖಾರಿನ್ ಎಲ್ಲ ರೀತಿ ಯಲ್ಲೂ ತನಗಿಂತ ಸಾವಿರ ಪಾಲು ಮೇಲು, ಎಂಬುದು ಸ್ಟಾಲಿನ್‌ಗೆ ಗೊತ್ತಿತ್ತು. ಬೌದ್ಧ ಧರ್ಮವನ್ನು ಭಾರತದಿಂದ ಓಡಿಸಲು ಆ ರೀತಿಯ ಭೀತಿಯೇ ಕಾರಣ. ಬೌದ್ಧಧರ್ಮವನ್ನು ಒಪ್ಪಿಕೊಳ್ಳುವುದಾದಲ್ಲಿ ಕೆಳಜಾತಿ ಶೂದ್ರರಿಗೂ ಸಮಾನ ಸ್ಥಾನ ನೀಡಬೇಕಾಗುತ್ತದೆ : ಎಂಬ ಹೆದರಿಕೆಯಿಂದ ಮೇಲ್ಜಾತಿ ಶೂದ್ರರು, ಬ್ರಾಹ್ಮಣರ ಜತೆ ಸೇರಿಕೊಂಡರು. ಬೌದ್ಧ ಧರ್ಮವನ್ನು ಓಡಿಸಲು ಮತ್ತು ಲೋಹಿಯಾ ಚಿಂತನೆ ಯನ್ನು ಜನರಿಂದ ಮರೆಮಾಚಲು ವ್ಯವಸ್ಥೆ ಅನುಸರಿಸಿದ ತಂತ್ರದಲ್ಲಿ ಹೋಲಿಕೆ ಇದೆ.

ಆದರೆ ಇಲ್ಲಿ ಒಂದು ಸತ್ಯ ಸಂಗತಿ ವಿಚಿತ್ರ ರೂಪದಲ್ಲಿ ಅಡಗಿದೆ. ಶಂಕರಾ ಚಾರ್ಯ ಎಂಬ ಶಬ್ದ ಕೆಲವರಿಗೆ ಗೊತ್ತಿರಬಹುದು. ಅದರಾಚೆಗೆ ಆತ ಏನೇನೂ ಲೋಹಿಯಾ ಹೆಸರು ಗೊತ್ತಿಲ್ಲದ ಜನರು ಹೆಚ್ಚಿರಬಹುದು. ಆದರೆ ಅವರಿಗೆಲ್ಲ ಲೋಹಿಯಾ ಚಿಂತನೆಯ ಅರಿವಿದೆ. ಏಕೆಂದರೆ ಆ ಲೋಹಿಯಾ ಬಂದದ್ದೇ ಜನರ ಒಳಗಿಂದ. ಜನರ ನಡುವೆ ಹಾಸುಹೊಕ್ಕಾಗಿದ್ದ ಭಾವನೆಗಳಿಗೆ ಬುದ್ಧ, ಚಿಂತನೆಯ ರೂಪ ನೀಡಿದಂತೆ ಲೋಹಿಯಾ ಕೂಡ ಜನರ ಅನೇಕ ಅನುಭವಗಳಿಗೆ ವೈಜ್ಞಾನಿಕ

ನೆಲೆಗಟ್ಟು ಒದಗಿಸಿದರು. ಈ ವೈರುಧ್ಯ ಶೀರ ವಿಚಿತ್ರ ಅನ್ನಿಸಬಹುದು. ಆದರೆ ಬಹಳ ಬಹಳ ಖರೆ ಮಾರಾಯರೇ !

ಕಮ್ಯೂನಿಸ್ಟರು ಎಂದು ಹೇಳಿಕೊಳ್ಳುವ ಜನರ ಹತ್ತಿರ ಖಾಸಗಿಯಾಗಿ ಜಾತಿ ವಿಚಾರ ಮಾತಾಡಿ ಬರಗಾಲ ಪ್ರದೇಶದಲ್ಲಿ ದಂಡಿಯಾಗಿ ಮಳೆಬಿದ್ದಂತೆ, ಆ ಮಾರ್ಕ್ಸ್‌ವಾದಿ ಜಲ್ಲನೆ ಜೀವ ತಳೆದುಬಿಡುತ್ತಾನೆ. ಈ ದೇಶದ ಕಮ್ಯೂನಿಸ್ಟ್ ಪಕ್ಷಗಳು ಹಲವು ವಿಚಾರಗಳಲ್ಲಿ ಲೋಹಿಯಾ ಚಿಂತನೆಗೆ ಹತ್ತಿರ ಆಗಿವೆ ಅಥವಾ ಲೋಹಿಯಾನನ್ನು ಅಳವಡಿಸಿಕೊಂಡಿವೆ - ಸಿ.ಪಿ.ಎಂ.ಎಲ್. ಜನರನ್ನು ಬಿಟ್ಟು. ಕಾಂಗ್ರೆಸ್ ಜನ ಮಾತ್ರ ಲೋಹಿಯಾನ ಕದಿಯಲಿಲ್ಲ. ಕಮ್ಯೂನಿಸ್ಟರೂ ಕದ್ದರೂ. ಇಲ್ಲದೇ ಇದ್ದಲ್ಲಿ ಕಮ್ಯೂನಿಸ್ಟರಿಗೂ ಉಳಿಗಾಲವಿರಲಿಲ್ಲ. ಉದಾಹರಣೆಗೆ, ಕೇರಳ ಮತ್ತು ಪಶ್ಚಿಮ ಬಂಗಾಳದಲ್ಲಿ ಕಮ್ಯೂನಿಸ್ಟರು ಜಾರಿಗೆ ತಂದಿರುವ ಕಾರ್ಯಕ್ರಮಗಳನ್ನು ನೋಡಿ ಅವೆಲ್ಲ ಲೋಹಿಯಾವಾದಿ – ಸಮಾಜವಾದಿ ಕಾರ್ಯಕ್ರಮಗಳೇ ಆಗಿವೆ. ಮತಪೆಟ್ಟಿಗೆ ಮೂಲಕವೇ ಕ್ರಾಂತಿ ನಡೆಸಬೇಕಾಗಿ ಬಂದಿರುವ ಅನಿವಾರ್ಯ (ದುರಂತ) ವನ್ನು, ಕಮ್ಯೂನಿಸ್ಟರೂ ಒಪ್ಪಿಕೊಂಡಿದ್ದಾರೆ. ಪಶ್ಚಿಮ ಬಂಗಾಳದಲ್ಲಿ ಮಾರ್ಕ್ಸ್‌ವಾದಿಗಳು ಇಂಗ್ಲೀಷ್ ವಿರುದ್ಧ ದನಿ ಎತ್ತಿದಾರೆ. ಇದೆಲ್ಲವನ್ನೂ ಕಮ್ಯೂನಿಸ್ಟರು ನೇರವಾಗಿ ಒಪ್ಪಿಕೊಳ್ಳೋದಿಲ್ಲ. ತಾತ್ಕಾಲಿಕ, ತಂತ್ರ ಎಂದೇನೇನೋ ಸುತ್ತಿ ಬಳಸಿ ಮಾತಾಡ ತೊಡಗುತ್ತಾರೆ. ಅದು ಬೇರೆ ವಿಚಾರ.

ಹಾಗಾದರೆ ಇಷ್ಟೆ ಏನು: ಲೋಹಿಯಾನಿಂದ ಏನೂ ಪರಿಣಾಮವಾಗಲಿಲ್ಲವೇ ಎಂಬ ಅನುಮಾನ ಇದನ್ನು ಓದುತ್ತಿದ್ದಂತೆಯೇ ನಿಮ್ಮನ್ನು ಕಾಡಬಹುದು. ಆ ಕುರಿತು ಮಾತನಾಡುವುದು ಬಹಳ ಕಷ್ಟದ ವಿಚಾರ. ಉದಾಹರಣೆಗೆ, ಈ ಒಕ್ಕಣಿಕೆ ಮತ್ತು ನನ್ನಂತೋನೊಬ್ಬ ನಿಮ್ಮಂತೋರಿಗೆ ಇದನ್ನು ಬರೆಯಲು ಸಾಧ್ಯವಾಗಿದ್ದು. ಈ ಎಲ್ಲದಕ್ಕೂ ರಷ್ಯನ್ ಕ್ರಾಂತಿ ಮತ್ತು ಲೆನಿನ್ ಕಾರಣ ಎಂದರೆ ಯಾರಾದರೂ ನಂಬುತ್ತಾರೆಯೇ ? ಬಹುಶಃ ನಂಬಲಾರರು. ಆ ಮಾತನ್ನು ಅರಿಯಲಾರದವರು ; ಭಾರತ ಮತ್ತು ಅಂತಹ ಅನೇಕ ದೇಶಗಳ ಜನರಿಗೆ ಸ್ವಾತಂತ್ರ ಲಭಿಸಲು ಲೆನಿನ್ ಹಾಗೂ ರಷ್ಯನ್ ಕ್ರಾಂತಿ ಕಾರಣ. ಈ ಹಿನ್ನಲೆಯಲ್ಲಿ ಗಾಂಧೀಜಿ ನಂತರ ಮೂಡಿದ ಭಾರತದಲ್ಲಿ ಏನಾದರು ಪ್ರಜಾಸತ್ತಾತ್ಮಕ ಸಂಘಸಂಸ್ಥೆಗಳು ಗಟ್ಟಿಗೊಂಡಿದ್ದಲ್ಲಿ ಮತ್ತು ಹಿಂದುಳಿದ ಜನರಿಗೆ ಏನಾದರೂ ಒಂದಿಂಕರ ದೊರೆತಿದ್ದಲ್ಲಿ, ಬಹುಪಾಲು ಲೋಹಿಯಾ ಮತ್ತು ಆತನ ಪರಿಣಾಮ ಕಾರಣ. ಈ ಮಾತು ಅರ್ಥವಾಗುವ ರೀತಿಯು ಇದೆಯೇ ! ಆದರೂ ಆ ಸತ್ಯ ಐನ್‌ಸ್ಟೈನನ ಸಾಪೇಕ್ಷ ಸಿದ್ಧಾಂತದಷ್ಟೇ ಖರೆ ನೋಡಿ !

ಇಷ್ಟೆಲ್ಲ ಮಾಡಿ ಬ್ರಾಹ್ಮಣ ಮತ್ತು ಮೇಲ್ಜಾತಿ ಶೂದ್ರ ಸಾಧಿಸಿದ್ದಾದರೂ ಏನು ? ಅಲ್ಲಿ ದಟ್ಟದರಿದ್ರರೇ ಇಲ್ಲವೇ ? ಪೆಟ್ಟು ತಿಂದವನಿಗಿಂತಲೂ ಹೆಚ್ಚಾಗಿ ಪೆಟ್ಟುಕೊಡುವವ : ಮಾನವೀಯತೆಯನ್ನು ಕಳೆದುಕೊಂಡಿರಬೇಕಾಗುತ್ತದೆ. ಹಾಗೇ ನಿಜವಾಗಲೂ ಮನುಷ್ಯರಂತೆ ನೋಡುವುದಾದಲ್ಲಿ : ಕೆಳಜಾತಿ ಶೂದ್ರನಂತೆಯೇ ಬ್ರಾಹ್ಮಣ ಮತ್ತು ಮೇಲ್ಜಾತಿ ಶೂದ್ರನೂ, ಬೇರೊಂದು ರೀತೀಲಿ ಕ್ರೂರ ಕುರುಡು ವ್ಯವಸ್ಥೆಗೆ, ಬಲಿಯಾದವನೇ ಅಲ್ಲವೇ ! ಆ ಕಾರಣ ಜನತೆ ಮತ್ತು ತನ್ನ ಒಂದು ಗುಂಪಿನ ಹಿತಾಸಕ್ತಿಗಳಿಗಾಗಿ ಜನರ ಹೆಸರಿನಲ್ಲಿ ಮೆರೆದಾಡುವ ವ್ಯಕ್ತಿಗಳು ಗುಂಪು ನಡುವೆ ಯಾವಾಗಲೂ ಅಗಾಧ ಅಂತರವಿರುತ್ತದೆ. ಆ ಜನ ಜನತೆಯ ನಿಜವಾದ ಪ್ರತಿನಿಧಿಗಳಾಗಲು ಸಾಧ್ಯವಿಲ್ಲ, ಅಂತೆಯೇ ತಮ್ಮ ಒಂದು ಗುಂಪಿನ ಹಿತಾಸಕ್ತಿಗಳಿಗಾಗಿ ಲೋಹಿಯಾವಾದದ ಕತ್ತು ಹಿಸುಕಿದ ಮೇಲ್ಜಾತಿ ಶೂದ್ರ ಲೋಹಿಯಾವಾದಿಗಳನ್ನು ಇತಿಹಾಸವೇ ಕಸದ ಬುಟ್ಟಿಗೆ ಎಸೆದಿದೆ. ಜಾತಿ ಕಾರಣಗಳಿಗಾಗಿ ಮಾರ್ಕ್ಸ್‌ವಾದಿಗಳಾದ, ಬ್ರಾಹ್ಮಣ - ಮಾರ್ಕ್ಸ್‌ವಾದಿಗಳು ಜನರಿಂದ ದೂರವಾಗಿ ಪೆಬ್ಬಬ್ಬೆ ಹೊಡೀತಾ ಇದಾರೆ.

ಹರಕಲು ಭೂಪಟದ ಹಾಗೇ ತುಪ್ಪು ತುಪ್ಪು ನೇತಾಡ್ತಾ ಇದೆ - ಭಾರತ : ಒಬ್ಬ ಲೋಹಿಯಾ ಇದ್ದಿದ್ದರೆ, ಮಾರ್ಕ್ಸ್‌ವಾದಿ ಅಥವಾ ಸಮಾಜವಾದಿ ಸಂಘಟನೆ ಬಲಹೊಂದಿದ್ದರೆ ! ಜರ್ಮನಿಯ ಬಿಸ್ಮಾರ್ಕ್ ಕೂಡ ಕಾರ್ಮಿಕ ವಿಮೆ ಇತ್ಯಾದಿ ಸಮಾಜವಾದಿ ಮಾತುಗಳನ್ನಾಡುತ್ತಿದ್ದ. ಕಾಂಗ್ರೆಸ್‌ನ ಸಮಾಜವಾದ ಎಂತಹ ನಯವಂಚನೆಯ ನಾಟಕವಾಗಿತ್ತು ಎಂಬುದು ಜನರಿಗೆ ಈವತ್ತು ಅರಿವಾಗಿದೆ. ಹಾಗಿದ್ದರೂ ಇಂದಿರಾ ಗಾಂಧೀನೇ ಗತಿ ಎಂದು ನೋಡಬೇಕಾಗಿದೆ. ಜನತೆಯ ಆ ಅರಿವು, ನಿರಾಸೆ ಹಾಗೂ ನೋವಿಗೆ ಸಂಘಟನೆಯ ರೂಪಕೊಡುವವರೇ ಇಲ್ಲವಾಗಿದ್ದಾರೆ. ಇಂತಹ ಒಳ್ಳೆಯ ಸಂದಿಗ್ಧ ಪರಿಸ್ಥಿತೀಲಿ ನೋಡಿದಾಗ ; ಜನತೆಗೆ ಕೈಕೊಟ್ಟವರು ಯಾರು ? ಮಾರ್ಕ್ಸ್‌ವಾದಿಗಳೊ, ಲೋಹಿಯಾವಾದಿಗಳೋ ಅಥವಾ ಕಾಂಗ್ರೆಸ್ ಜನರೋ ? ಅವರಲ್ಲಿ ಯಾರು ಹೆಚ್ಚು ಪಾಕಡಾಗಳು ! ಆಳುವ ವರ್ಗದ ಜನ ಯಾವಾಗಲೂ ವರ್ತಿಸೋದು ಅದೇ ರೀತಿ !

ಎಲ್ಲಾ ಮಾರ್ಕ್ಸ್‌ವಾದಿಗಳು ಮತ್ತು ಲೋಹಿಯಾವಾದಿಗಳು ಉದ್ದೇಶಪೂರ್ವಕವಾಗಿಯೇ ಆ ರೀತಿ ವರ್ತಿಸಿದರು. ಕ್ರಾಂತಿ ಅಥವಾ ಬದಲಾವಣೆ ಬರದಂತೆ ತಡೆಯುವುದೇ ಅವರ ಹುನ್ನಾರಾಗಿತ್ತು. ಆ ಕಾರಣವೇ ಮಾರ್ಕ್ಸ್ ಮತ್ತು ಲೋಹಿಯಾ ಚಿಂತನೆ, ಜನತೆಯ ಕೈಗೆ ಹೋಗದಂತೆ ನೋಡಿಕೊಳ್ಳುವುದೇ, ಅವರ ಹೋರಾಟದ ಗುರಿಯಾಗಿತ್ತು. ಹಾಗಾಗಿ ಉದ್ದಕ್ಕೂ ಅವರು ಕಾಂಗ್ರೆಸ್ ಜತೆ

ಶಾಮೀಲಾದರು ಎಂದು ಬೆರಳು ತೋರಿಸಿ, ಖುಷಿ ಪಡುವುದು ಇಲ್ಲಿನ ಉದ್ದೇಶವಲ್ಲ. ಆದರೂ ನೋಡಿ, ಆ ಎರಡು ಸಂಘಟನೆಗಳು ಆ ರೂಪದಲ್ಲಿ ಕಾಣಿಸಿಕೊಂಡವು. ಅವುಗಳು ಹಿಡಿದ ದಾರಿ ಆದಾಯಿತು ಮತ್ತು ತಲುಪಬೇಕಾದವರನ್ನು ತಲುಪಲೇ ಇಲ್ಲ ಎಂದು ವಾಸ್ತವವನ್ನು ಗುರುತಿಸುವುದು. ವೈಯುಕ್ತಿಕವಾಗಿ ಮಾರ್ಕ್ಸ್‌ವಾದಿಗಳು ಮತ್ತು ಲೋಹಿಯಾವಾದಿಗಳು ಪ್ರಮಾಣಿಕರು ಅಥವಾ ಅಪ್ರಮಾಣಿಕರು ಎಂಬುದು ಅಷ್ಟು ಮುಖ್ಯವಲ್ಲ. ನಿಜವಾದ ಅರ್ಥದಲ್ಲಿ ಮಾರ್ಕ್ಸ್‌ವಾದಿಗಳು ಮತ್ತು ಲೋಹಿಯಾವಾದಿಗಳು ಆಗಿದ್ದವರು ಸಾವಿರಾರು ಮಂದಿ ಇದಾರೆ. ತತ್ವಕ್ಕಾಗಿ ಮತ್ತು ಸಂಘಟನೆಗಾಗಿ ಸ್ವಂತ ಬದುಕನ್ನು ತ್ಯಾಗ ಮಾಡಿದವರು, ಹುಡುಕುತ್ತಾ ಹೋದರೆ ಬೀದಿ ಬೀದಿಗಳಲ್ಲಿ ಸಿಗಬಹುದು ! ಅದು ಬೇರೆ ವಿಚಾರ.

*　　　　　　*　　　　　　*

ಅದು ನಿಜವೇ ಆಗಿದ್ದಿರಬಹುದು. ಅದಕ್ಕೆ ಅವರು ಮಾತ್ರ ಕಾರಣರೇ ! ಬೀದೀಲಿ ಮಾರ್ಕ್ಸ್‌ವಾದ ಮಾತಾಡಿ, ಮನೇಲಿ ಜುಟ್ಟು ಜನಿವಾರ ಆಗುವುದನ್ನು ಕಂಡು ಹೇಸಿಗೆ ಆಗುವಂತೆಯೇ ; ಕೈಲಿ ಬಂದೂಕು ಹಿಡಿದು ಲೋಹಿಯಾವಾದಿಯಾಗ ಬಯಸುವ ಭೂ ಮಾಲೀಕ ಮೇಲ್ಜಾತಿ ಶೂದ್ರನನ್ನು ನೋಡಿ, ಅಸಹ್ಯ ಬರುವುದು ಸಹಜ. ಹಾಗಾಗಿ ಈ ಕಡೆ ಲೋಹಿಯಾ ಚಿಂತನೆಗೂ ತುಯ್ಯಲಾರದೆ ಆ ಕಡೆ ಮಾರ್ಕ್ಸ್‌ವಾದಕ್ಕೂ ಬೆಸೆದುಕೊಳ್ಳಲಾರದೆ, ಕೆಳಜಾತಿ ಶೂದ್ರ ಸಮುದಾಯ ಸ್ಥಿತೀಲಿ ನೇತಾಡುತ್ತಿದೆ. ಅದರಿಂದ ನಷ್ಟ ಆದದ್ದು ಯಾರಿಗೆ ? ಮಾರ್ಕ್ಸ್‌ವಾದವೂ ಬೇಡ ಲೋಹಿಯಾವಾದವೂ ಬೇಡ. ಮತ್ಯಾವ ಕನಸಿನ ಬೆನ್ನಲುಬು ಕೆಳಜಾತಿ ಶೂದ್ರರಿಗಿದೆ? ಕೆಳಜಾತಿ ಶೂದ್ರರು ; ಮಾರ್ಕ್ಸ್ ಅಥವಾ ಲೋಹಿಯಾ ಚಿಂತನೆಯನ್ನು ತಮ್ಮ ಕೈಗೆ ತೆಗೆದುಕೊಂಡಿದ್ದಲ್ಲಿ ಏನಾಗುತ್ತಿತ್ತು ; ಎಂದು ಯೋಚಿಸಬೇಕಾದ ತುರ್ತು ಕಂತ್ತಿಗೆಗೆ ಬಂದಿದೆ. ಈ 'ಪಂಚರಂಗಿ' ದುರವಸ್ಥೆಗೆ ಬ್ರಾಹ್ಮಣ ಮಾರ್ಕ್ಸ್‌ವಾದಿ ಮತ್ತು ಮೇಲ್ಜಾತಿ ಶೂದ್ರ ಲೋಹಿಯಾವಾದಿ ಮಾತ್ರವೇ ಕಾರಣವಲ್ಲ: ನಾವುಗಳೂ ಆಗಿದ್ದೀವಿ ಎಂಬುದನ್ನು ಕೆಳಜಾತಿ ಶೂದ್ರ ಸಮುದಾಯ ಮನಗಾಣಬೇಕಿದೆ. ಪ್ರಮಾಣದಲ್ಲಿ ಅಂತರವಿರಬಹುದು.

ಮಾರ್ಕ್ಸ್‌ವಾದ ಅಥವಾ ಲೋಹಿಯಾವಾದದ ತರಲೆ ಬೇಡ ಎಂದು ಹೇಳಲಿಕ್ಕಾದರೂ ಚರ್ಚೆ ಆರಂಭಿಸಬೇಕಿದೆ. ಬೇಡ ಎಂದು ಹೇಳುವುದೇ, ಯಾವುದು ಬೇಕು ಎಂಬುದರ ಕಡೆಗೆ ಕೈ ತೋರಿಸುತ್ತದೆ. ಮಾರ್ಕ್ಸ್‌ವಾದ, ಲೋಹಿಯಾವಾದ, ಅಂಬೇಡ್ಕರ್‌ವಾದ, ಅಥವಾ ಮತ್ಯಾವುದೇ ವಾದಗಳು ಸೋಪಾನಗಳೇ ವಿನಃ

ನೇಣುಗಂಬಗಳಲ್ಲ. ಅಂತಹ ಸೋಪಾನಗಳನ್ನು ಕಂಡುಕೊಳ್ಳುವುದು ಮುಂದಿನ ಹೊಣೆಗಾರಿಕೆಯಾಗಿದೆ. ಬೌದ್ಧ ಧರ್ಮವನ್ನು ಮತ್ತೆ ಕೈಹಿಡಿದು ಕರೆತಂದ ಅಂಬೇಡ್ಕರ್; ಭಾರತದ ಕೊಳಕು ರಕ್ತಕ್ಕೆ ಮಾನವೀಯತೆಯ ಇಂಜಕ್ಷನ್ ನೀಡುವ ಪ್ರಯತ್ನ ಮಾಡಿದರು. ಅದು ಎಷ್ಟರ ಮಟ್ಟಿಗೆ ಪ್ರಸ್ತುತ ಅಥವಾ ಯಶಸ್ವಿ ಎಂಬ ಪ್ರಶ್ನೆ, ಅಸಂದರ್ಭಿಕವಾಗುತ್ತದೆ. ಯಾವುದೇ ಚಿಂತನೆ ಅಥವಾ ಸಂಘಟನೆಗಳಿಗೆ ರಕ್ತ ತುಂಬಬೇಕಾದವರು ಕೆಳಜಾತಿ ಶೂದ್ರರಾಗಿದ್ದಾರೆ. ಅವರು ಓ.ಕೆ. ಮಾತದೆ ಮತ್ತು ಅತ್ಯಂತ ದೊಡ್ಡ ಪ್ರಮಾಣದಲ್ಲಿ ಭಾಗವಹಿಸದೆ: ಬದಲಾವಣೆ ಅಥವಾ ಕ್ರಾಂತಿ ತರಬಯಸುವ ಯಾವುದೇ ಚಿಂತನೆ ಮತ್ತು ಸಂಘಟನೆಗಳು ಬದುಕಲಾರವು.

ಹಾಗಾದರೆ ಕೆಳಜಾತಿ ಶೂದ್ರರು choosen people ಎಂದು ಹೇಳಿದ ಹಾಗಾಯಿತು. ಆದರೆ ಅಂಬೇಡ್ಕರ್ ಸತ್ತನಂತರದ ಭಾರತದಲ್ಲಿ ಆಗಿರುವ ಬೆಳವಣಗೆಯನ್ನು ಗಮನಿಸಿರುವ ಯಾರಾದರೂ ಆ ಮಾತನ್ನು ನಂಬಲು ಸಾಧ್ಯವೇ? ಉದಾಹರಣೆಗೆ, ಜಯಪ್ರಕಾಶ್ ನಾರಾಯಣ್ ಕನಸೊಡೆದು ಸತ್ತ ರೀತಿ. 'ಜೆ ಪಿ. ಒಬ್ಬ ಪ್ರಾಜ್ಞ' ಎಂಬ ಅಭಿಪ್ರಾಯವನ್ನು ಕೆಲವರು ಸಮ್ಮತಿಸದೇ ಹೋಗಬಹುದು. ರಾಜಕೀಯವಾಗಿ ಆತನನ್ನು ಒಪ್ಪದೇ ಹೋಗಬಹುದು. ಆದರೆ ಜೆ. ಪಿ. ಒಬ್ಬ ಕನಸಿಗ. ಆತನಿಗೆ ಯಾವುದೇ ತರಹದ ಸ್ವಾರ್ಥ ಇರಲಿಲ್ಲ ಎಂಬ ಬಗ್ಗೆ ಭಿನ್ನಾಭಿಪ್ರಾಯ ಇರಲಾರದು. ಲೆನಿನ್‌ನನ್ನು ಸ್ಟಾಲಿನ್, ಕೊಲೆಮಾಡಿದ ಎಂಬುದಾಗಿ ಟ್ರಾಟ್ಸ್ಕಿ ಹೇಳುತ್ತಾನೆ. ಇಲ್ಲಿ ಕೊಲೆ, ಕೇವಲ ದೈಹಿಕವಾದ ಕೊಲೆಗೆ ಮಾತ್ರ ಸೀಮಿತವಲ್ಲ. ಆ ಅರ್ಥದಲ್ಲಿ ಗಾಂಧೀಜೀಯನ್ನು ಕೊಂದಾತ ಗೋಡ್ಸೆ ಅಲ್ಲ - ಶ್ರೀಮಾನ್ ಜವಹರಲಾಲ್ ನೆಹರೂ ಅದೇ ರೀತಿ ಜೆ ಪಿ.ಯನ್ನು ಕೊಲೆಮಾಡಲಾಯಿತು. ಮೊರಾರ್ಜಿ ದೇಸಾಯಿ ಮತ್ತು ಚರಣ್ ಸಿಂಗ್ ಕಂಪನಿ ನಡೆಸಿದ ಆ ಸಂಚಿನಲ್ಲಿ, ಜಗಜೀವನರಾಂ ಕೂಡ ಪಾತ್ರವಹಿಸಬೇಕಾಗಿ ಬಂದ ಸಂಗತಿ: ಪರಿಸ್ಥಿತಿ ಯಾವ ಹಂತ ತಲುಪಿದೆ ಎಂಬುದರ ಸಾಕ್ಷಿಗುಡ್ಡೆಯಾಗಿದೆ.

ಈವತ್ತು ಯಾರೂ choosen people ಆಗಿ ಉಳಿದುಕೊಂಡಿಲ್ಲ. ಆ ರೀತಿ ಉಳಿದುಕೊಳ್ಳಲು ವ್ಯವಸ್ಥೆ ಬಿಡುವುದೂ ಇಲ್ಲ. ಅದೇ ಅದರ ದೀರ್ಘ ಆಯುಸ್ಸಿನ ಮರ್ಮ. ತುಳಿತಕ್ಕೊಳಗಾದ ಸಮುದಾಯದ ಒಳಗಿಂದ ಅರಳಿದ ಎಚ್ಚೆತ್ತ ಮನಸ್ಸುಗಳನ್ನು ವ್ಯವಸ್ಥೆ ಕೊಂಡುಕೊಳ್ಳುತ್ತಾ ನಡೆಯುತ್ತದೆ. ಯಾರೋ ಒಬ್ಬ ಪಾಳೇಗಾರನ ಮನೆಯಲ್ಲಿ ಕಸ ಹೊರುತ್ತಿದ್ದ ಕರಿಯನ ಮಗ: ಶಿಕ್ಷಣ ಕಲಿತ ನಂತರ, ಕಾಲೇಜು ಅಥವಾ ಕಚೇರಿಯಲ್ಲಿ ಬಂಧಿಯಾಗಿಬಿಡುತ್ತಾನೆ. ಅದೊಂದು ತರಹದ ಜೀತ. ಇದೊಂದು ತರಹದ ಜೀತ. ಅಂತರ ಇರುವುದು ಜೀತದ ವಿಧಾನಗಳಲ್ಲಿ! ಈ ಒಳಗಿಂದ ಮುಂದಿನ ಸೋಪಾನಗಳನ್ನು ಗುರುತಿಸಿಕೊಳ್ಳಬೇಕಾಗಿದೆ. ಸಮಾಜವಾದ ಕೆಳಜಾತಿ ಶೂದ್ರರಿಗೆ ಮಾತ್ರವಲ್ಲ, ಬ್ರಾಹ್ಮಣ ಮತ್ತು ಮೇಲ್ಜಾತಿ ಶೂದ್ರರಿಗೂ: ಮೊದಲು ಮನುಷ್ಯರಾಗಬೇಕಾದವರು ಅವರು.

# ಚದುರಂಗರಿಗೆ ಕೆಲವು ಪ್ರಶ್ನೆಗಳು

—ಟಿ.ಪಿ. ಅಶೋಕ

ನೀವು ಪ್ರಗತಿಶೀಲ ಚಳುವಳಿಯೊಂದಿಗೆ ಸಂಪರ್ಕವಿಟ್ಟುಕೊಂಡಿದ್ದವರು. ಆ ಚಳುವಳಿ ಸಫಲವಾಯಿತೆಂದು ನಿಮಗೆ ಅನ್ನಿಸುತ್ತದೆಯೆ?

ಪ್ರಗತಿಶೀಲ ಚಳುವಳಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರವರ್ಧಮಾನವಾಗಿದ್ದ ಕಾಲದಲ್ಲಿ ನನ್ನ ಬರವಣಿಗೆ ಹೆಚ್ಚು ಕಡಿಮೆ ಚಾಲ್ತಿ ಪಡೆಯಿತು ಎನ್ನಬಹುದು. ಅ.ನ. ಕೃಷ್ಣರಾಯರು ನನ್ನ ಮೊದಲ 'ಸ್ವಪ್ನಸುಂದರಿ' ಕತಾ ಸಂಗ್ರಹಕ್ಕೆ ಮುನ್ನುಡಿ ಬರೆದು ಹರಸಿದವರು. ಆಗಿನ ಕಾಲದಲ್ಲಿ ಪ್ರಗತಿಶೀಲರೆಂದು ಹೆಸರಾಗಿದ್ದ ತ. ರಾ. ಸು. ನಿರಂಜನ, ಬಸವರಾಜಕಟ್ಟೀಮನಿ, ನಾಡಿಗೇರ ಕೃಷ್ಣರಾಯ, ಕುಮಾರ ವೆಂಕಣ್ಣ, ಬೀಚಿ, ಅರ್ಚಕ ವೆಂಕಟೇಶ–ಇವರೆಲ್ಲ ನನ್ನನ್ನು ತಮ್ಮ ಬಳಗದವನೆಂದೇ ಭಾವಿಸಿದ್ದರು. ಅಂದರೆ ಪ್ರಗತಿಶೀಲ ಚಳುವಳಿಗೂ ನನಗೂ ಆರಂಭದಲ್ಲಿ ಸಂಪರ್ಕವಿದ್ದುದಂತೂ ವಾಸ್ತವ ಸಂಗತಿಯೇ. ನವೋದಯ ಸಾಹಿತ್ಯ ಕೀರ್ತಿಸುತ್ತಿದ್ದ ಅಂದಿನ ಸಮಾಜಿಕ ವ್ಯವಸ್ಥೆಯ ಮೌಲ್ಯಗಳಿಗೆ ಪ್ರತಿಕ್ರಿಯೆ ಎನ್ನುವಂತೆ ಪ್ರಗತಿಶೀಲ ಚಳುವಳಿ ಜನ್ಮತಾಳಿತು ಎನ್ನಬಹುದೇನೊ.

ಈ ಚಳುವಳಿ ಸಫಲವಾಯಿತೆ ಎನ್ನುವ ಪ್ರಶ್ನೆ ಎತ್ತಿದ್ದೀರಿ ಇತಿಹಾಸದುದ್ದಕ್ಕೂ ರಾಜಕೀಯವಾಗಿ, ಸಾಮಾಜಿಕವಾಗಿ, ಸಾಹಿತ್ಯಕವಾಗಿ ಚಳುವಳಿಗಳು ನಡೆದುಕೊಂಡೇ ಬಂದಿರುವುದು ನಮಗೆಲ್ಲರಿಗೂ ಗೊತ್ತಿರುವ ವಿಷಯವೇ ಆಗಿದೆ. ಇಂಥ ಚಳುವಳಿಗಳಿಗೆ ಯಾವ ಕಾಲದಲ್ಲೂ ಸಂಪೂರ್ಣ ಯಶಸ್ಸು ದೊರೆತಿಲ್ಲ ಎನ್ನುವುದೂ ಸಹ ಸ್ವಯಂ ವೇದ್ಯವೇ ಆಗಿದೆ. ಆದರೆ ಆಯಾ ಕಾಲಕ್ಕೆ ತಾತ್ಕಾಲಿಕವಾಗಿ ಇಂಥ ಪಂಥಗಳು ತಮ್ಮ ಪ್ರಭಾವ ಬೀರುವುದಲ್ಲಿ ಯಶಸ್ಸು ಪಡೆದಿದೆ ಎನ್ನುವುದನ್ನು ನಾವು ತಳ್ಳಿಹಾಕುವಂತಿಲ್ಲ.

---

**'ಶೂದ್ರ'ದ ಸಂವಾದ ವೇದಿಕೆಗೆ ನಮ್ಮಲ್ಲಿಯ ಸೂಕ್ಷ್ಮ ಸಂವೇದಿ ಲೇಖಕರಾದ ಚದುರಂಗರವರು. ಟಿ.ಪಿ. ಅಶೋಕರವರ ಪ್ರಶ್ನೆಗಳಿಗೆ ಉತ್ತರಿಸಿದ್ದಾರೆ. ಅಶೋಕರವರು ನಮ್ಮಲ್ಲಿಯ ಪ್ರತಿಭಾವಂತ ವಿಮರ್ಶಕರು. ಅವರಿಬ್ಬರಿಗೂ ಶೂದ್ರ ಋಣಿಯಾಗಿದೆ.**

**ಸಂ**

ಪ್ರಗತಿಶೀಲ, ಪ್ರಗತಿಪಂಥ ಮತ್ತು ಬಂಡಾಯ ಈ ಚಳುವಳಿಗಳಲ್ಲಿ ಮೂಲ ಭೂತವಾಗಿ ಯಾವುದೇ ವ್ಯತ್ಯಾಸವಿಲ್ಲವೆಂದು ಕೆಲ ವಿಮರ್ಶಕರ ಅಭಿಪ್ರಾಯ. ಇದಕ್ಕೆ ನೀವೇನು ಹೇಳುತ್ತೀರಿ?

ಪ್ರಗತಿಶೀಲ, ಪ್ರಗತಿಪಂಥ ಇವುಗಳಲ್ಲಿ ಅಂಥ ವ್ಯತ್ಯಾಸವೇನೂ ನನಗೆ ಕಂಡುಬರುವುದಿಲ್ಲ. ಇರಬಹುದಾದ ವ್ಯತ್ಯಾಸವೆಂದರೆ ಕಾಲಮಾನದ್ದು .ಇವೆರಡರ ನಡುವೆ ವಸ್ತುನಿಷ್ಠ ನವ್ಯ ಪಂಥ ಹುಟ್ಟಿಕೊಂಡಿತು. ಈ ವಸ್ತುನಿಷ್ಠ ಬರವಣಿಗೆ. ಸಾಮಾನ್ಯವಾಗಿ ಜ್ವಲಂತ ಸಾಮಾಜಿಕ ಸಮಸ್ಯೆಗಳಿಗೆ ಕಣ್ಮುಚ್ಚಿ, ವ್ಯಕ್ತಿಯ ಅಂತರಂಗ ಶೋಧನೆಯಲ್ಲಿ ತನ್ನನ್ನು ತೊಡಗಿಸಿಕೊಂಡಾಗ, ಮೊದಲು ಪ್ರಗತಿ ಪಂಥ, ತರುವಾಯ ಬಂಡಾಯ ದಲಿತ ಪಂಥಗಳು ತಲೆಯೆತ್ತಿದವು ಎನ್ನಿಸುತ್ತದೆ.

ಶೋಷಣೆಗೆ ಒಳಗಾದ ಜನಸಾಮಾನ್ಯರ ಬಗ್ಗೆ ಈ ಎಲ್ಲ ಪಂಥದವರಿಗೂ ವಿಶೇಷ ಕಾಳಜಿ. ಆದರೆ ಮಧ್ಯಮ ಹಾಗೂ ಕೆಳಮಧ್ಯಮ ವರ್ಗಕ್ಕೆ ಸೇರಿದ ಪ್ರಗತಿಶೀಲರಿಗೆ, ದೀನದಲಿತರ ಕುರಿತು ಸಹಾನುಭೂತಿ ಇತ್ಯಾದರೂ ಬಂಡಾಯ ಮತ್ತು ದಲಿತ ಸಾಹಿತಿಗಳ ಕೆಳಜಾತಿ ಮತ್ತು ಶೋಷಿತ ವರ್ಗದಿಂದಲೇ ಬಂದ ವರಾದ್ದರಿಂದ ಶೋಷಣೆಗೆ ಸಂಬಂಧಪಟ್ಟ ಹಾಗೆ ಅವರ ಸಾಹಿತ್ಯ ಹೆಚ್ಚು ಅಥೆಂಟಿಕ್ ಎಂಬ ಭಾವನೆಗೆ ಇಂಬು ಕೊಟ್ಟಿದೆ. ಆದರೆ ಹೀಗೆ ವರ್ಗೀಕರಣ ಮಾಡಿ ಸಾಹಿತ್ಯವನ್ನು ಅಳೆಯುವಾಗ ನನ್ನನ್ನು ಕೆಲವು ಸಂದೇಹಗಳು ಕಾಡುತ್ತವೆ. ಸಮಾಜದ ಯಾವ ವರ್ಗಕ್ಕೆ ಸೇರಿದವರೇ ಆಗಲಿ, ಅನುಭವ ಸತ್ಯವಾಗಿದ್ದರೆ ಬೇರೆ ವರ್ಗಗಳ ಬಗ್ಗೆಯೂ ಬರೆಯಲು ಸಾಧ್ಯವಿಲ್ಲವೆ? ಇಲ್ಲ, ಅಂದರೆ ಆಯಾಯ ಜಾತಿ ಉಪಜಾತಿಗಳಿಗೆ ಸೇರಿದವರೇ ಆಯಾ ಜಾತಿ ಉಪಜಾತಿ ಗಳ ವಿಷಯವಾಗಿ ಬರೆಯಬೇಕೆ? ಮತ್ತೆ ಗಂಡು ಹೆಣ್ಣಿನ ಬಗ್ಗೆ ಬರೆಯದೆ ತಮ್ಮ ತಮ್ಮ ವಿಷಯಗಳ ಕುರಿತೇ ಆಲೋಚಿಸಿ ಬರೆಯಬೇಕೆ? ಇದನ್ನು ಒಪ್ಪುವು ದಾದರೆ ಗಂಡು ಹೆಣ್ಣಿನ ಸಮಸ್ಯೆಗಳನ್ನು ಒಟ್ಟಾರೆ ಸಮರ್ಥವಾಗಿ ನಿರೂಪಿಸಿರುವ 'ಅನ್ನಾಕೆರನೀನಾ' '(Anna Karenina) ವಿಚಾರವಾಗಿ ಏನು ಹೇಳೋಣ'? ಇನ್ನು ಷೇಕ್‌ಸ್ಪಿಯರ್ ನಾಟಕಗಳನ್ನು ಕುರಿತು ಯಾವ ಮಾನದಂಡ? ಅಲ್ಲದೆ, ಬೇರೆ ಬೇರೆ ಸ್ತರದ, ವಿಭಿನ್ನ ವರ್ಗಗಳ ಸಂಘರ್ಷ, ಒಳನೋಟಗಳನ್ನು ಅದ್ಭುತ ವಾಗಿ ಚಿತ್ರಿಸಿರುವ "ವಾರ್ ಅಂಡ್‌ಪೀಸ್, (war and peace) ಕಾದಂಬರಿ ಯನ್ನು ಯಾವ ನಿಲುವಿನಿಂದ ಅಳೆಯಬೇಕು? ಇನ್ನೂ ಹತ್ತಿರಕ್ಕೆ ಬಂದು ನಮ್ಮ ಆಧುನಿಕ ಸಾಹಿತ್ಯ ಚರಿತ್ರೆಯನ್ನೇ ಗಮನಿಸಿ ವಿವೇಚಿಸುವಾಗ, ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ ದಲಿತ—ಇಂಥ ವಿಂಗಡಣೆಗಳು, ಪೂರ್ಣ

ಸತ್ಯವನ್ನು ಬಿಂಬಿಸುತ್ತವೇನು? ನವೋದಯದ ಕಾಲಕ್ಕೆ ಸೇರಿದ ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಕಾಲಮಾನದ ದೃಷ್ಟಿಯಿಂದ ಈಚೀಚಿಗೆ ಪ್ರಕಟಗೊಂಡಿತಲ್ಲವೆ? ರಾವಬಹದ್ದೂರರ "ಗ್ರಾಮಾಯಣ" ನವ್ಯ ಪಂಥಕ್ಕೇ ಸೇರಿದ್ದೆಂದುಹೇಳಬಹುದೆ?

ಇವು ನನ್ನ ಕೆಲವು ಅನುಮಾನಗಳು. ವಿಮರ್ಶಕರಾದ ನಿಮ್ಮಂತಹವರು ಇಂಥ ವಿಚಾರದಲ್ಲಿ ಆಳವಾಗಿ ಅಧ್ಯಯನ ಮಾಡಿರುವುದರಿಂದ ವೈಯುಕ್ತಿಕವಾಗಿ ನನಗೆ ವಿವರಣಾರೂಪದ ಪತ್ರ ಬರೆದು ತಿಳಿಸಿದರೆ ನಾನು ಉಪಕೃತನಾಗಿರುತ್ತೇನೆ.

3. ನೀವು "ಸರ್ವಮಂಗಳಾ" ಚಿತ್ರವನ್ನು ತೆಗೆಯಲು ಕಾರಣವೇನು? ನಿಮ್ಮ ಕಾದಂಬರಿಯನ್ನು ಅನಕ್ಷರಸ್ಥರಿಗೂ ಮುಟ್ಟಿಸುವುದು ನಿಮ್ಮ ಉದ್ದೇಶವಾಗಿತ್ತೆ? ಅಥವಾ ಚಲನಚಿತ್ರ ಮಾಧ್ಯಮದಲ್ಲಿ ನೀವು ಹೇಳಿಕೊಳ್ಳಬೇಕಾಗಿದ್ದನ್ನೆಲ್ಲ ಹೇಳಿಕೊಳ್ಳಬಹುದು ಎನಿಸಿತ್ತೆ? ಅಥವಾ ನೀವು ಇನ್ನೊಂದು ಮಾಧ್ಯಮದಲ್ಲಿ ಕೇವಲ ಒಂದು ಪ್ರಯೋಗ ಮಾಡಬೇಕೆಂದು ಕೊಂಡಿದ್ದಿರಾ?

ನಾನು "ಸರ್ವಮಂಗಳಾ" ಚಿತ್ರವನ್ನು ತೆಗೆಯಲು ಕಾರಣವೇನು ಎಂದು ಕೇಳಿದ್ದೀರಿ. ನಿಮಗೆ ಸತ್ಯಹೇಳಬೇಕಾದರೆ, ಆರ್ಥಿಕವಾಗಿ ನನಗೆ ತುಂಬಾ ಕಷ್ಟದ ದಿನಗಳು ಅವು. ಆಗ ಆ ಚಿತ್ರ ಮಾಡುವ ದುಡುಕಿನ ಉದ್ದೇಶ ಮುಖ್ಯವಾಗಿ ನನ್ನ ಆರ್ಥಿಕ ಸ್ಥಿತಿಯನ್ನು ಕೊಂಚಮಟ್ಟಿಗಾದರೂ ಸುಧಾರಿಸಿಕೊಳ್ಳಬೇಕೆಂಬುದೇ ಆಗಿತ್ತು. ಆದರೆ, ವಿಚಿತ್ರವೆಂದರೆ, ಹಣ/ಸಂಪಾದನೆಗಾಗಿ ನಾನು ಚಿತ್ರೀಕರಣದ ಎಂಥ ಕಠಿಣ ಸಂದರ್ಭದಲ್ಲೂ Compromise ಮಾಡಿಕೊಳ್ಳಲು' ತಯಾರಿರಲಿಲ್ಲ. ಈ ಸಾಹಿತ್ಯ ಕೃತಿಯನ್ನು ಹೊಸ ಮಾಧ್ಯಮದಲ್ಲಿ ವಾಸ್ತವಕ್ಕೆ ಆದಷ್ಟು ಹತ್ತಿರವಾಗಿ ತೋರಿಸಲು ಸಾಧ್ಯವೇ? ಎಂಬ ಆಕಾಂಕ್ಷೆ ನನ್ನದಾಗಿತ್ತು. ಅದೇ ಹಳ್ಳಿಯ ಉಡುಗೆ ತೊಡಿಗೆ, ಅದೇ ಪರಿಸರ, ಅದೇ ಮನೆಯಲ್ಲಿ, ದನದ ಕೊಟ್ಟಿಗೆಯಲ್ಲಿ, ಬೆಟ್ಟ ಬಯಲುಗಳಲ್ಲಿ ಚಿತ್ರೀಕರಣ ನಡೆಸಿದ್ದೆ ಮೊದ ಮೊದಲು ಸ್ವಲ್ಪ ಹೆದರಿಕೆ ಇತ್ತು, ಆಕಾಲಕ್ಕೆ ಇದೊಂದು ಹೊಸ ಪ್ರಯೋಗ. ನನ್ನ ಈ ಸಾಹಸದಿಂದ ಇದಕ್ಕೆ ಹಣ ಹಾಕಿದ್ದ ನನ್ನ ಮಿತ್ರರಿಗೆ ಎಲ್ಲಿ ಅನ್ಯಾಯ ಮಾಡುತ್ತಿರುವೆನೋ ಎನ್ನುವ ಆತಂಕ ಒಂದುಕಡೆ ಅಂತರ್ಯದಲ್ಲಿ ಜಗ್ಗುತ್ತಿತ್ತು. ಆದರೂ ಈ ಹೊಸ ಮಾಧ್ಯಮದಲ್ಲಿ ಇಂಥ ಒಂದು ದೊಡ್ಡಗಾತ್ರದ ಕಥೆಯನ್ನು ಅಳವಡಿಸಿ ನೋಡಬೇಕೆಂಬ ಕುತೂಹಲವೂ ನನ್ನನ್ನು ಹೇಗೂ ಮುನ್ನಡೆಸಿತ್ತು. ಈ ಚಿತ್ರಮಾಡಿ ಹಣ ಬರಲಿಲ್ಲ. ಹಣ ಹೋಗಲೂ ಇಲ್ಲ. ಎಷ್ಟೋವರ್ಷಗಳ ಬಳಿಕ ಹೂಡಿದ

ಬಂಡವಾಳ ವಾಪಸ್ಸು ಬಂದಾಯಿತು. ಒಟ್ಟಿನಲ್ಲಿ ಈ ಚಿತ್ರ ತೆಗೆದದ್ದು ನನ್ನ ಒಳಗೆ ಎಲ್ಲೋ ಒಂದು ಕಡೆ ಚಿತ್ರ ಮೂಲ ಕಾದಂಬರಿಗೆ ಅಂಥ ಅನ್ಯಾಯ ಮಾಡಿಲ್ಲ, ಕೆಲವು ಸನ್ನಿವೇಶಗಳಲ್ಲಾದರೂ ಪರಿಣಾಮಕಾರಿಯಾಗಿ ಮೂಡಿ ಬಂದಿದೆ ಎನ್ನಿಸಿ, ಚಿತ್ರದ ಮೂಲಕವೂ ನಾನು ಹೊಸದೇನನ್ನೋ ಹೇಳಿಕೊಳ್ಳಲು ಪ್ರಾಮಾಣಿಕವಾಗಿ ಪ್ರಯತ್ನ ಪಟ್ಟಿದ್ದೇನೆ, ಎನ್ನುವ ಕ್ಷಮಾರ್ಹ ಸಮಾಧಾನ ಇಂದಿಗೂ ನನ್ನದಾಗಿದೆ.

"ಉಯ್ಯಾಲೆ" ಯನ್ನು ಬೇರೊಬ್ಬ ನಿರ್ದೇಶಕರು ಚಿತ್ರೀಕರಿಸಿದರು. ನೀವೇ ಅವನ್ನು ಚಿತ್ರೀಕರಿಸಿದ್ದರೆ ಚೆನ್ನಾಗಿರುತ್ತಿತ್ತು ಎಂದು ನಿಮಗೆ ಅನ್ನಿಸಿದೆಯ?

"ಉಯ್ಯಾಲೆ"ಯನ್ನು ನನ್ನ ಪರಮ ಮಿತ್ರರೂ ಕನ್ನಡ ಚಿತ್ರ ಪ್ರಪಂಚದ ಶ್ರೇಷ್ಠ ನಿರ್ದೇಶಕರಲ್ಲೊಬ್ಬರಾದ ಶ್ರೀ ಎನ್. ಲಕ್ಷ್ಮೀನಾರಾಯಣ ಅವರು ಆ ಚಿತ್ರವನ್ನು ಸಮರ್ಥವಾಗಿಯೇ ಚಿತ್ರೀಕರಿಸಿದ್ದಾರೆ, ಎನ್ನುವುದು ಸರ್ವ ವಿದಿತ. ನಾನೇ ಅದನ್ನು ಚಿತ್ರೀಕರಿಸಿದ್ದರೆ, ಅದು ಬಹುಶಃ ಕೆಲವು ಅಂಶಗಳಲ್ಲಿ ಭಿನ್ನವಾಗಿರುತ್ತಿತ್ತೋ ಏನೊ! ಆದರೆ ಉತ್ತಮವಾಗಿರುತ್ತಿತ್ತು ಎಂದು ಹೇಳುವುದು ಉದ್ಧಟತನವಾದೀತು!

"ಉಯ್ಯಾಲೆ" ಬರೆದ ಇಪ್ಪತ್ತು ವರುಷಗಳ ನಂತರ "ವೈಶಾಖ" ಬರೆದಿರಿ. ಆ ಇಪ್ಪತ್ತು ವರುಷಗಳಲ್ಲಿ ಕನ್ನಡ ಸಾಹಿತ್ಯದಲ್ಲೇ ಅನೇಕ ಬದಲಾವಣೆಗಳು ಆಗಿ ಹೋದವು ಅಲ್ಲವೆ? ಈ ಬದಲಾವಣೆಗೆ ಹೊಂದಿಕೊಳ್ಳಲು ನಿಮಗೆ ಕಷ್ಟವಾಯಿತೆ? ""ಇಲಿಬೋನು" ನಾಟಕದಲ್ಲಿ ಬದಲಾವಣೆ ನಿಮ್ಮಲ್ಲೂ ಕಾಣುತ್ತದೆ. ಆದರೆ ಇಪ್ಪತ್ತು ವರ್ಷಗಳು ಸುಮ್ಮನೇ ಇದ್ದು ಬಿಟ್ಟಿರಲ್ಲ?

- ಹೌದು 'ಉಯ್ಯಾಲೆ' ಬರೆದು ಇಪ್ಪತ್ತುವರ್ಷಗಳು ಕಳೆದು ಹೋದರೂ ನಾನು ಹೊಸ ಕೃತಿಯೇನನ್ನೂ ಬರೆಯಲಿಲ್ಲ. ಅಷ್ಟರಲ್ಲಿ ನೀವು ಹೇಳುವ್ಯಹಾಗೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅನೇಕ ಬದಲಾವಣೆಗಳು ಆಗಿ ಹೋಗಿದ್ದವು. ನಿಜ, ಅನಂತರ ಈ ಬದಲಾವಣೆಗೆ ಹೊಂದಿಕೊಳ್ಳಲು ನನಗೆ ಕಷ್ಟವೇ ಆಯಿತು. Ripvan winkleಥರ ಆಗಿತ್ತು ನನ್ನ ಸ್ಥಿತಿ. ಆದರೂ ಕನ್ನಡ ಜನ ನನ್ನನ್ನು ಮರೆತಿರಲಿಲ್ಲ ಎನ್ನುವುದು ಒಂದು ಸೋಜಿಗವೇಸರಿ. ಈ ದೀರ್ಘಾವಧಿಯಲ್ಲಿ ನನಗೆ ಬಗೆಬಗೆಯ ಅನುಭವಗಳಾಗಿದ್ದರೂ ಮನಸ್ಸಿಗೆ ಜೋಮು ಹಿಡಿದಂತಾಗಿತ್ತು, ಬರವಣಿಗೆ ಸಂಪೂರ್ಣ ಮರೆತು ಹೋಯಿತೇ ಹೇಗೆ ನೋಡೋಣ ಎಂಬ ಸಂಸರನ್ನು ಅನುಸರಿಸಿ "ಕುಮಾರರಾಮ" ಐತಿಹಾಸಿಕ ನಾಟಕ ಬರೆದೆ. ಅದನ್ನು ಬರೆಯುತ್ತಿದ್ದಂತೆ ಬರವಣಿಗೆ ನನ್ನನ್ನು ತ್ಯಜಿಸಿ ಹೋಗಿಲ್ಲ ಎಂಬ

ಧೈರ್ಯ ಬಂದಿತು. ಅನಂತರ ಹೊಸ ಸಾಹಿತ್ಯ ಕೃತಿಗಳನ್ನು ಓದಿಕೊಂಡೆ, ಹೊಸ ನಾಟಕಗಳನ್ನು ನೋಡಿದೆ. ಅದರಲ್ಲೂ ಅಸಂಗತ ನಾಟಕ ನನಗೆ ಬಹಳ ಮೆಚ್ಚಿಕೆಯಾಯಿತು. ಯಾಕೆಂದರೆ ನನ್ನ ಬದುಕೂ ಅಸಮಯದಲ್ಲಿ ಅಸಂಗತವಾಗಿ ತೋರುತ್ತಿತ್ತು. ಇದೆಲ್ಲದರ ಪ್ರಭಾವದಿಂದ "ಇಲಿಬೋನು" ನಾಟಕ ರಚಿಸಿದೆ.

ಮತ್ತೆ "ಇಪ್ಪತ್ತು ವರ್ಷ" ಏನೂ ಬರೆಯದೆ ಇದ್ದು ಬಿಟ್ಟಿರಲ್ಲ" ಎಂಬ ಪ್ರಶ್ನೆ ಕೇಳಿದ್ದೀರಿ. ಇದರ ಬಗೆಗೆ ತಿಳಿಸಬೇಕಾದರೆ ಆ ಅವಧಿಯ ನನ್ನ ಬದುಕಿನ ಘಟನೆಗಳನ್ನೆಲ್ಲ ದಾಖಲಿಸಬೇಕಾಗುತ್ತದೆ. ಅನೇಕ ತೊಂದರೆಗಳು, ಉಪದ್ರವಗಳು, ಕಿರುಕುಳಗಳು ನನ್ನ ಬರೆಯುವ ಕೈಗಳನ್ನು ಕಟ್ಟಿ ಹಾಕಿದ್ದವು, ಎಂದು ಹೇಳಿದರೆ ಸಾಕು ಎನ್ನಿಸುತ್ತದೆ. ಆದರೆ ಇದರಿಂದ ವೈಯಕ್ತಿಕವಾಗಿ ನಾನು ಸಂಕಟಗಳನ್ನು ಅನುಭವಿಸಿದರೂ ಸಾಹಿತ್ಯದ ದೃಷ್ಟಿಯಿಂದ ಲಾಭವೇ ಆಯಿತು. ಇಲ್ಲದಿದ್ದರೆ ನಾನೆಂದಿಗೂ "ವೈಶಾಖ"ದಂಥ ಕಾದಂಬರಿಯನ್ನು ಬರೆಯಲು ಸಾಧ್ಯವೇ ಆಗುತ್ತಿರಲಿಲ್ಲವೇನೊ!

ಕೊನೆಯ ಪ್ರಶ್ನೆ. ಜುಲೈ ಸೆಪ್ಟೆಂಬರ್–1983 "ರುಜುವಾತು"ದಲ್ಲಿ ಪೋಲಂಕಿ ರಾಮಮೂರ್ತಿಯವರು "ವೈಶಾಖದ ಪಾತ್ರ ಪ್ರಸಂಗಗಳು ಒಂದು ದುರದೃಷ್ಟ ಅಪ್ರಸಂಗವೆನ್ನಬೇಕಾಗಿದೆ, ವಿಷಾದದಿಂದ" ಎನ್ನುತ್ತಾರೆ. ನಿಮ್ಮ ಕೃತಿಗಳ ಬಗ್ಗೆ ನೀವು ಮೌನತಾಳಬೇಕೆಂಬುದಾಗಿ ಅಭಿಪ್ರಾಯ ಪಡುತ್ತಾರೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆ ಏನು? ನಾನು ಈ ಪ್ರಶ್ನೆಯನ್ನೇ ಮೊದಲು ಕೇಳಬೇಕಿತ್ತೆ?

ನಿಮ್ಮ ಕೊನೆಯ ಪ್ರಶ್ನೆಗೆ ಉತ್ತರ ಕೊಡುವುದು ನನಗೆ ಬಹಳ ಕಠಿಣವೆನಿಸುತ್ತಿದೆ. ಶ್ರೀ ಗೌರೀಶಕಾಯ್ಕಿಣಿಯವರು ವಿಚಾರಶೀಲ ಸೋಪಜ್ಞ ವಿಮರ್ಶಕರೆಂದು ಹೆಸರಾದವರು. ಅವರು "ವೈಶಾಖ" ಕಾದಂಬರಿ ಓದಿ ಅದರ ಬಗ್ಗೆ ಕೆಲವು ಮೂಲಭೂತ ಪ್ರಶ್ನೆಗಳಿಗೆ ಉತ್ತರ ಬರೆಯಬೇಕೆಂದು ಅಪೇಕ್ಷಿಸಿದರು. ಅವರು ನನಗೆ ಪ್ರಿಯ ಸ್ನೇಹಿತರೂ ಆದುದರಿಂದ, ನನಗೆ ತಿಳಿದಂತೆ ಉತ್ತರಗಳನ್ನು ಬರೆದು ಕಳುಹಿಸಿದೆ. ಒಡನೇ ಮಿತ್ರರು ಈ ಪ್ರಶ್ನೊತ್ತರಗಳು ಸ್ವಾರಸ್ಯವಾಗಿರುವುದರಿಂದ, ಇದನ್ನು ಪ್ರಕಟಿಸಲು ನನ್ನ ಅನುಮತಿ ಕೇಳಿದರು. ನನಗೆ ಸಂಕೋಚವಾಯಿತು. ಆದರೂ ಸ್ನೇಹಕ್ಕೆ ಕಟ್ಟುಬಿದ್ದು, ಪ್ರಕಟಿಸಬಹುದೆಂದು ಒಪ್ಪಿಗೆಯಿತ್ತೆ.

ಈ ಪ್ರಶ್ನೋತ್ತರಗಳನ್ನು ಓದಿದ ನನ್ನ ಇನ್ನೊಬ್ಬ ಆತ್ಮೀಯ ಮಿತ್ರರೂ ಅಷ್ಟೇ ಪ್ರತಿಭಾವಂತ ವಿಮರ್ಶಕರೂ ಆದ ಶ್ರೀಪೋಲಂಕಿ ರಾಮಮೂರ್ತಿ

ಯುವರು ಬೇಸರಪಟ್ಟು, ಲೇಖಕ ತನ್ನ ಕೃತಿಗಳ ಬಗ್ಗೆ ಮೌನ ತಾಳಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಒಂದು ದೃಷ್ಟಿಯಿಂದ ಅವರ ಅಭಿಪ್ರಾಯ ಸಮಂಜಸವಾಗಿ ತೋರುತ್ತದೆ, ನಾನು ಆ ಕಾದಂಬರಿ ಬರೆಯುವಾಗ ಅದರ ನಡೆ ಹೇಗಿರುತ್ತವೆ, ಅಲ್ಲಿನ ಪಾತ್ರಗಳು ಹೇಗೆ ವರ್ತಿಸಬೇಕು ಎನ್ನುವ ಪೂರ್ಣ ಕಲ್ಪನೆ ನನಗಿರಲಿಲ್ಲ. ನಾನು ಚಿತ್ರಿಸಿದ ಕೆಲವು ಘಟನೆಗಳು ಸಂಗತಿಗಳು ಇತರರಿಗೆ ಸಂಕೇತಗಳಾಗಿ ಕಾಣುತ್ತವೆ ಎಂಬ ಕಲ್ಪನೆಯೂ ನನಗಿರಲಿಲ್ಲ. ಒಬ್ಬ ಲೇಖಕ ಒಂದು ಕೃತಿ ರಚಿಸಿದ ಬಳಿಕ, ಅದು ಓದುಗರ ಸ್ವತ್ತು ಅದರ ಗುಣ ದೋಷಗಳನ್ನು ವಿಮರ್ಶಿಸುವ ಹಕ್ಕು ಅವರಿಗುಂಟು.

ಆದರೆ ಬರೆದು ಮುಗಿಸಿದ ಬಳಿಕ, ಅದರ ಬಗ್ಗೆ ತನ್ನ ಸ್ವಂತ ಅಭಿಪ್ರಾಯಗಳನ್ನು ವ್ಯಕ್ತಪಡಿಸಹೋಗುವುದು ಸರಿಯಲ್ಲ ಎನ್ನುವ ಗೆಳೆಯ ಪೋಲಂಕಿಯವರ ಅಭಿಪ್ರಾಯ ಸಾಧುವಾದುದು ಎಂದು ಈಗ ನನಗನ್ನಿಸುತ್ತಿದೆ. ತಮ್ಮ ಅಭಿಪ್ರಾಯದ ಸಮರ್ಥನೆಗಾಗಿ ಟಾಲ್‌ಸ್ಟಾಯ್ ತನ್ನ ಜಗದ್ವಿಖ್ಯಾತ ಕಾದಂಬರಿ 'ಅನ್ನಾಕೆರನೀನ' ಕುರಿತು ವ್ಯಕ್ತಪಡಿಸಿದ ವ್ಯಾಖ್ಯಾನ ಎಷ್ಟು ದೋಷ ಪೂರಿತವೂ, ಅವಿವೇಕಯುತವೂ ಆಗಿತ್ತು ಎಂಬ ಸಂಗತಿಯನ್ನು ಅವರು ಶ್ರುತಪಡಿಸಿ, ಲೇಖಕನಾದವನು. ಒಂದು ಕೃತಿ ರಚನೆಮಾಡಿದ ಬಳಿಕ, ಅದನ್ನು ಕುರಿತ ಟೀಕೆ ಟಿಪ್ಪಣಿಗಳನ್ನು ಪ್ರಾಜ್ಞರಾದ ವಿಮರ್ಶಕರಿಗೆ ಒಪ್ಪಿಸಿ, ತಾನು ಮೌನವಾಗಿ ಉಳಿಯುವುದು ಕ್ಷೇಮ, ಎಂದು ವಿವೇಕದ ಮಾತುಗಳನ್ನಾಡಿದ್ದಾರೆ. ಗೆಳೆಯ ಪೋಲಂಕಿಯವರ ಈ ಅಭಿಪ್ರಾಯವನ್ನು ನಾನು ಸಂಪೂರ್ಣವಾಗಿ ಅನುಮೋದಿಸುತ್ತೇನೆ—ಮಿತ್ರಗೌರೀಶ ಕಾಯ್ಕಿಣಿಯವರ ಕ್ಷಮೆ ಕೋರಿ.

## ಹಗಲುಗನಸುಗಾರ

ಸೊಗಸುಗಾರ ಸರದಾರ
ಹಗಲುಗನಸುಗಾರ
ಎಲ್ಲರಂತಲ್ಲ ಅವನು
ಭಾರಿ ಮೋಜುಗಾರ

ಗಾಳಿಕುದುರೆ ಏರುತಾನೆ
ಏಳುಕಡಲ ಮೀರುತಾನೆ
ಇವನ ಕನಸಿಗೆಷ್ಟೊ ದಾರ
ಸಾಗಿದಷ್ಟೂ ದೂರ

ಗಾಳಿಗಿರಣಿ ಮಂತ್ರ ಭರಣಿ
ತಲೆಗೆ ಕವಚ ಬೋಗುಣಿ
ಸೆಣಸಿದರೂ ಎಲ್ಲರೊಡನೆ
ಗೆಲುವ ನೀತನೊಬ್ಬನೆ

ಬಿಸಿಲ ಬೇಗೆ ಬೀಳದಲ್ಲಿ
ಯಾವ ಹೂ ದೋಟದಲ್ಲಿ
ಅಮೃತಮತಿಯ ಕೂಡೆ ಸಂಗ
ಎಂಥ ಘಳಿಗೆಯಲ್ಲಿ ಭಂಗ

ಮಂಚದಿಂದ ಬಿದ್ದನೇ
ಮೈ ತಡವಿ ಎದ್ದನೇ
ಬಾಗಿಲಾಚೆ ಹೋಗಲಾರ
ಕಿಟಕಿ ತೆರೆದು ನೋಡಲಾರ

---

ಡಾ॥ ಕೆ. ವಿ. ತಿರುಮಲೇಶ್, ರೀಡರ್, ಸಿ.ಐ.ಇ.ಎಫ್.ಎಲ್, ಹೈದರಾಬಾದ್-500 007.

ಹಗಲುಗನಸಿಗದುವೆ ಮುಸುಕು
ತಾಳಲೆಂತು ನಿಜದ ಬೆಳಕು
ಚಿಪ್ಪಿಯೊಳಗೆ ಕುಳಿತು ಹುಳ
ಆಳುವುದು ಲೋಕಗಳ

—ಕೆ. ವಿ. ತಿರುಮಲೇಶ್

## ಸಿಂಧೂ ನದಿಯ ದಂಡೆಯ ಮೇಲೆ

ಓ ಶ್ರದ್ಧೆಯೇ ನಮ್ಮನ್ನು ಶ್ರದ್ಧಾವಂತರನ್ನಾಗಿ ಮಾಡು

—ಋಗ್ವೇದ

### 1

ನಿಚ್ಚಳ ನೀಲಿ ಆಗಸದ ಬಂಗಾರ ಸೂರ್ಯ
ಸಿಂಧೂ ನದಿಯ ನೀರು ಹೊಳೆಸಿ
ಥಳಥಳಸಿದ ಭೂಮಿ ಸ್ಫಟಿಕದಂತೆ
ಕೊರಳಲ್ಲಿ ಗಮ್ಮೆನ್ನುವ ಹೂಹಾರ
ನೆಲದ ಬೆವರು ಚಿಮ್ಮಿದ ತೆನೆತೆನೆ ಬೆಳೆ
–ಯುಂಡ ಸ್ವಚ್ಛ ಗಾಳಿಯ ಉಸಿರು
ಕಣ್ಣು ಸರಳ ರೇಖೆಯ ಬೆಳಕ ಉಸಿರು
ಶಬ್ದ ಕಿವಿಯಲಿ
ಹಡೆದವ್ವ ಮಲಗಿಸುವ ಜೋಗುಳ
ಮುಟ್ಟಿದರೆ ಚಿನ್ನ, ಮಣ್ಣೂ
ಎಂಥ ಮೆದು ಎಂಥ ಹದಕ್ಕೆ
ಯಾವ ಸಾಗರದಾಚೆಯಿಂದ ಬಂದರು
ಈ ಅತಿಬಳ ಯಕ್ಷರು, ಗಂಧರ್ವ ಸುಂದರರು
ಒಂದೊಂದೆ ಕಣ್ಣು ಕಳೆಯುತ್ತಾ

---

ಚಂದ್ರಶೇಖರ ತಾಳ್ಯ, ತರ್ಕ ಶಾಸ್ತ್ರ ಅಧ್ಯಾಪಕ, ಹೊಳಲ್ಕೆರೆ, ಚಿತ್ರದುರ್ಗ ಜಿಲ್ಲೆ.

ಉಸಿರುಸಿರಿನೊಳಗೇ ಪರಕಾಯ ಹೊಕ್ಕು
ಅಂತಃಪುರದಲ್ಲಿ
ಸಖೀಗೀತದ ಹಕ್ಕಿ ಹಾಡಿಗೆ
ಹಾಕಿದ ರಾಗ ಯಾವುದು ಹೇಳು ?

2

ಎಲೆ ಅಲುಗಿದರೆ ಜ್ಞಾನದ ನರ ಸೆಟೆದೆದ್ದು
ಮುಗಿಲುದ್ದ ಕೈ ಚಾಚಿ
ಗಾಳಿಯಾಡಿದ ಕಡೆಗೆ ಓಡೋಡಿ
ನೆಲ ಬಗೆದು
ನೆಲೆ ಕಂಡಕೊಳ್ಳುವ ಹಟದ ಜೀವಕ್ಕೆ
ಬಾನ ದೀವಿಗೆ ಭ್ರಮೆಯು
ಬೆಳೆವ ಮರವಲಿ ಚಿಗುರು ಹರಿವ ಭ್ರಹ್ಮರಾಕ್ಷಸ
ಹರಿವ ನೀರೊಳಗೆ ಗಂಗಾದೇವಿ
ಉಣ್ಣುವಾಟದೊಳಗನ್ನ ದೇವರ ಮಾಯೆ
ಕಣ್ಣು ನೋಟಕ್ಕೆ ಸಿಕ್ಕು
ಸಿಕ್ಕಾದ ಕಾಮ
ಆಟಕ್ಕೆ ಅಟಮಟಕ್ಕೆ ಇಂದ್ರ
ವರುಣ ಅಗ್ನಿಗಳ ದಾಟ
ವಿರಾಡ್ ಪುರುಷನ ಹೆರಿಗೆ ನೋವು ದೇವರೇ
ಕಾಲು ಮೈ ಜಾಡಿಸಿದ ಪೃಥ್ವಿಯೊದರಾಟಕ್ಕೆ
ಸಿಕ್ಕ ಸಿಕ್ಕದ್ದೆಲ್ಲ ಧ್ವಂಸ
ಆಕಾಶ ತಲೆ
ನೆಲದ ಕಾಲು
ತೋಳ
ತೆಕ್ಕೆಯಲಿ ಭ್ರಹ್ಮಾಂಡ
ದೈತ್ಯ ನಗೆ ನಕಕವನ ಬಾಯಿಂದ
ಎಂಥ ಗೀತೆ
–ಯ ಲಹರಿ
ಅಕ್ಷೋಹಿಣಿ ಅಕ್ಷೋಹಿಣಿಗಳನೂ

ನುಂಗಿ ನೊಣೆದ ಜಯದೇವಿಯು
ಕಿಬ್ಬೊಟ್ಟೆಯಲ್ಲೊಂದು ಕಳ್ಳ ಬಸಿರು.

3

ನೆಲ ಹಿಡಿದ ಬೆಂಕಿಯು ಚೂರು
ನೆಲೆ ಇಲ್ಲದೇ ಡಾಡುವ ಹರಕು ಜನ
ಕುಂಡೆಯಂಗುಲ ತಂಪು ಕಾಣದ ಕೆಂಪು ಕಣ್ಣಿನ ಜನ
ಕಂಪು ಮಾತುಗಳನಾಲಿಸುತ್ತಾ ಕೆಂಡವ ಸಹಿಸುವರು
ಜಡಿ ಮಳೆಯು ಒಡಲೂ ಅವರಿಗೊಂದೆ
ಹೊಲದಲ್ಲಿ ಮನೆಯಲ್ಲಿ ಪಡಸಾಲೆಯಂಚಲ್ಲಿ
ಮೂಲೆ ಮುಂಗಟ್ಟುಗಳನಡರಿದ
ತೊನ್ನು ಕುಷ್ಠ ಕ್ಷಯದ ಸ್ವತ್ತುಗಳ ವಾರಸುದಾರರೇ
ತೆಗೆದುಕೊಳ್ಳಿ ಮಾತುಗಳ ಹಿಡಿಬುಟ್ಟಿ
‘ಸರ್ವೇ ಜನಾಹ ಸುಖಿನೋ ಭವಂತು’
ಮನೆಯೊಳಗಿನ ವೃಂದಾವನ ಕಾರಂಜಿಗಳು
ಪುಟಿದೆದ್ದು, ತಂಬುಲದ ರಸ ಕೆಂಪು
ತುಂಬು ಮೊಲೆ ಗುಂಪೊಳಗೆ ರಾಸಲೀಲೆ
...ಯು ಕೃಷ್ಣ
ಎಂಥ ಚೆಲುವನಮ್ಮ ನಮ್ಮ ರಂಗ
ಮೋಡದೋಗೆ, ಕಾಣುವಳ ಬಳ್ಳಿಯೊಳಗೆ
ಹರಿವ ತಿಳಿ ನೀರಿನೊಳಗೆ
ಒಡೆದ ಕಂಬದುದರದೊಳಗೆ ಹಂದಿಯಾಗಿ,
ತೋಳವಾಗಿ, ಕಳ್ಳರೊಳಗೆ ಕುಳ್ಳನಾಗಿ
ತ್ರಿವಿಕ್ರಮ ನೆಗೆತಂದಂತರಂಗದಲ್ಲಿ
ಗೋಪಿಕೆಯರ ಬತ್ತಲು ಮೈಯಾವರಿಸಿದ
ಕಪ್ಪು ಬಣ್ಣದ ಗೊಲ್ಲ
ಕೃಷ್ಣಮಯ ಎಲ್ಲ.

4

ಗವ್ವಿರುಳ ಕತ್ತಲಿಗೊಂದೊಂದೆ
ಮಂದನಿಲನಡರಿ ಕುಡಿಯೊಡೆವ ಚಿಗುರು ಬಳ್ಳಿ

ಮೊಗ್ಗೆ ಹೂ ಗಮ್ಮತ್ತಿಡಿ
ಉಸಿರುಸಿರು ಪ್ರೇಮಗಾನದ ತವರಾಗಲಿ
ತೊಲಗಲೀ ಮುಪ್ಪು ಕ್ಷಯ ಕುಷ್ಠ
ಬೇರಿಂದ ಹರಿಯಲಿ ಕೊಂಬೆಗೆ
ಜೀವ ಜೀವಾಳ
ತೆರೆಯಲೀ ಅಂತರಾಳ
ಸೂಳೆಯರು ಅರಳಿದರು
ಖಡ್ಗಗಳು ತೆಪ್ಪಗಾದವು
ಕಾಲು ತಲೆಗಡರಿ ಮೈ ಬೆವರು ಬಸಿದು
ನೆಲದ ತುಂಬ ಕಾಳು ತೆನೆ
ಹಕ್ಕಿಗಳು ಹಾಲುಂಡು ಗುಟುಕು ನೀಡುವ
ಮರಗಳಲ್ಲಿ ಬೆಚ್ಚಾನೆ ಬೆಚ್ಚಗಿನ ಗೂಡು
ಜಗಕೆಲ್ಲ ಯಜ್ಞ ಹೋಮದ ಅಮಲು
ಬುದ್ಧನ ತುಟಿಗಳಲಿ ಎಂಥ ಮಂದಹಾಸದ ಹೊನಲು

## 5

ಋಾವ ಹಗಲಿನ ಮಾಯೆ ಇದು
ತಟ ತಟನೆ ತಟಕ್ಕನೆ ಮಿಂಚು
ಕಗ್ರನೆಯ ದೈತ್ಯ ಮೋಡದ ಹಿಂದೆ.
ಕಾಡಲ್ಲಿ ಪರ್ಣಕುಟಿಗಳ ಮೇಲೆ
ಮುಗಿಲೆತ್ತರದ ಮುಗಿಲು ಹಿಸುರಿಂದಿಳಿದ
ಬೆಳ್ಳಿ ನೀರು ಆಚೀಚೆ
ಹೋಮ ಕುಂಡದ ಸುತ್ತ ಹರಿದದ್ದೆ
ಮಂತ್ರ ಘೋಷಗಳಿಗ್ಯಾಕೋ ಕಣ್ಣೀರ ಧಾರೆ
ದೇವಾನು ದೇವತೆಗಳ ಜಾತ್ರೆ ನೆರೆಯಿತು
ಋಷಿ ಮುಗ್ಧರ ಋಷಿಗೇನಾಯಿತು
ಚಿಂತೆಗೆರೆಗಳ ನಡುವೆ ಉರುಳುರುಳಿ
ಬೀಳುವ ಮರಳು ಗುಡ್ಡೆ
ಮಂಜುಗಡ್ಡೆಯ ಕೊರೆದ ಗಾಳಿ
ಸುಳಿಸುಳಿಯಾಗಿ ಕಂಕುಳಿಗೆ ಕೈಯಿಟ್ಟು
ಕಚಕುಳಿ

ನೆರೆತ ಗಡ್ಡದ, ಕುಳಿಬಿದ್ದ ಕಂಗಳ
ಆತ್ಮೋದ್ಧಾರಕ್ಕೆ ಆತ್ಮವೊಂದೇ ಉಳಿದ
ಎಲುಬುಗೂಡಿನ ಒಳಗೆ
ಗಿರಿಗುಡ್ಡ ಗಹ್ವರದ ಕಾಂತಿಮಾಯ.

6

ಸತ್ತವು ಹಕ್ಕಿಗಳು ಮರಿಗಳು
ಧಗಧಗಿಸುವಗ್ನಿಕುಂಡದ ಗಂಧ ಕೆಂಡಕ್ಕೆ
ಸೀಕ್ಕು ಸೀದವು
ಅತ್ತರು ಸಿಂಪಡಿಸಿ ಹೆಣದ ಮೈಗೆ
ನಗುವ ನಗುಗಳ ನಡುವೆ
ಹುಟ್ಟಿದ ನಾಗಾರ್ಜುನನ ಕೋಡೊಂದು ತಿವಿಯಿತು
ಬುದ್ಧ ಗುರುವಿನ ಮೈಯ ಮೃದು ಮೂಲಗಳನ್ನು
ಪಂಚೇಂದ್ರಿಯಗಳ ಗೆದ್ದ ಜನ
ಮೈ ಪರಚಿ ಕೂದಲ ಕಿತ್ತೊಸರಿದ ರಕ್ತ
ಸ್ನಾನವಿಲ್ಲದ ಮೈಯಿ
ನೂರು ಯೋಜನದುದ್ದ ಚರಂಡಿ ಗಂಧ
ಚಲ್ಲಿ ಚಾರ್ವಾಕನ ಕಣ್ಣ ಮೇಲೆ ನೊಣಕೂತ ಪಾಪೆ
ಚೂಪನೆಯ ನುಣುವು ಬಂಗಾರ ಕತ್ತಿಗಳಿರಿದು
ದಿಕ್ಕು ದಿಕ್ಕಿಗೆ ನೆತ್ತರಿನಭಿಷೇಕ.

7

ದಸರೆ ಹಬ್ಬದಲ್ಲೀಗ ಕೋವಿಗೂ ಪೂಜೆ ತಪ್ಪಿದಲ್ಲ
ಗ್ರಹಗತಿ ತಾರೆಗಳ ದಿಕ್ಕುದೆಸೆ
ಕಳೆದುಹೋದ ಎಮ್ಮೆಗೆ ಪಂಚಾಂಗ ಕಣ್ಣು
ಉಗಾದಿ ಚಂದ್ರಗೆರೆಯೇ ತೇಬಿಗೆ ಗಣಿತ
ಗಂಗೆಯ ಹೆಣ ಗಂಗೆಯಲಿ ತೇಲಿದರೂ
ಕಾಶಿಯಲಿ ಕೈಲಾಸ ದೀಪ
ನಮ್ಮನೆಯ ಎತ್ತಿಗೂ ಬಸವನ ವಿಭೂತಿ
ಪಾಪ
ಗಾಂಧಿಯೆದೆಯೊಳಗ್ಯಾಕೋ ರಕ್ತ ಕೋಡಿ.

## 8

ಸಿಂಧೂ ನದಿಯ ದಂಡೆಯ ಮೇಲೆ
ಕುಂತವನ ಕಣ್ಣೊಳಗೆ
ಹೂವರಳಿದ ಕೋಟೆಗಳು
ಸ್ವಚ್ಛ ಸ್ನಾನ ಗೃಹಗಳು
ಹಸಿರು ತುಂಬಿದ ವನಗಳು
ಶಿವನ ಪ್ರೇಮದ ಕಣ್ಣುಗಳು
ಎಲ್ಲಿ ಹೋದವು ಕನಸಿನ ಹಕ್ಕಿಗಳು
ಜೀವ ರೆಕ್ಕೆಯ ಬಡಿದು
ಹುಡಕಿರೋ ಡಿಲ್ಲಿಯೊಳಗೆ
ಬೆಂಗಳೂರಿನ ಕಾಂಕ್ರೀಟು ಸಂದಿಯೊಳಗೆ
ನಮ್ಮ ಎದಿಯೊಳಗೆ.

—ಚಂದ್ರಶೇಖರ ಶಾಳ್ಕ

## ಗುಬ್ಬಿ

ಪುಟ್ಟಹಕ್ಕಿ ಗುಬ್ಬಿಯ ಬಗ್ಗೆ ಸಂಗತಿಗಳನ್ನು ಪ್ರೋಢೀಕರಿಸೋದಾದರೆ–

ಅದರ ರೇಖಾಚಿತ್ರ ಅಗದೀ ಸುಲಭ, ಆದರೆ
ಗುಬ್ಬಿಯಂತೆಯೇ ಯಥಾವತ್ ಎಳೆಯುವುದು ಮಹಾನ್ ಕಲಾವಿದನಿಗೆ
ಮಾತ್ರ ಸಾಧ್ಯ,

ಪೆನ್ನನ್ನು ಪರೀಕ್ಷಿಸಲು ಗೀಚುತ್ತಿರುವಾಗೊಮ್ಮೊಮ್ಮೆ ಎಲೆಲೆ ಗುಬ್ಬಚ್ಚಿ
ಮೂಡಿಬಿಡತ್ತೆ.

ಹಾಗೆ ಮೂಡುವುದರಲ್ಲಿ ಮಹಾನ್ ಕಲಾವಿದನಿಗೂ ಸಿಕ್ಕದ ಜಾಣ್ಮೆ
ಮತ್ತು ಅನಹಂಕಾರ ಇದೆ

ಅನ್ನಿಸುತ್ತೆ.

---

ಎಸ್. ಮಂಜುನಾಥ್, 2/48, ಅರ್ಥನಾಥ ರಸ್ತೆ, ಎರಡನೇ ಕ್ರಾಸ್. ಕೆ. ಆರ್. ನಗರ, ಮೈಸೂರು ಜಿಲ್ಲೆ.

ಒಳ್ಳೆಯ ಚಿತ್ರ ಬರೆಯಬೇಕೆನ್ನುವವರು
ತೆನೆ, ತೆನೆಯ ಮೇಲೊಂದು ಗುಬ್ಬಿ ಬರೆದರೆ ಸಾಕು.

ಗುಬ್ಬಿಗಳಿಗೆ ಅಕ್ಕಿ ಎಂದರೆ ಇಷ್ಟ; ಅವು
ಅಕ್ಕಿಯನ್ನು ಹೆಕ್ಕಿ ತಿನ್ನುತ್ತವೆ,
ಅಕ್ಕಿ ಮತ್ತು ಹೆಕ್ಕಿಯ ಪ್ರಾಸದಂತೆ ಗುಬ್ಬಿ
ಮತ್ತು ಅಕ್ಕಿ ಹೇಗೆ ಹೊಂದತ್ತೆ ಗೊತ್ತಾ :
ಅಕ್ಕಿಯನ್ನೆರಚಿಬಿಡಿ, ಕಾಳಿಗೊಂದೊಂದರಂತೆ
ಹಕ್ಕಿ ಬಂತು ನೋಡಿ!

(ಗುಬ್ಬಿಯ ದೇಹದ ಬಗ್ಗೆ ವರ್ಣಿಸಿದರೆ.
ಎಲ್ಲರಿಗೂ ಗೊತ್ತಿದ್ದನ್ನೇ ಹೇಳಿದಂತಾಗತ್ತೆ) ಅಕ್ಕಿಯ ಮಧ್ಯ
ಸಿಕ್ಕುವ ಭತ್ತವನ್ನದು ಸಿಗಿಯುತ್ತದೆ,
ಅಷ್ಟು ಕುಶಲ ಬ್ಲೇಡಿದೆಯೋ ಅದರ ಬಾಯಲ್ಲಿ
ಅನ್ನೋದು ಗುಬ್ಬಿಯ ಬಣ್ಣ ಎಂಥದು ಅನ್ನುವಂತೆಯೇ
ನನ್ನ ಕೈಲಿ ಹೇಳಲಿಕ್ಕಾಗದು.
ಮುಳ್ಳುಗಿಡ–ಅದು ಜಾಲಿಯೂ?–ಅದರ ಮೈತುಂಬ ಕೂರುವ
ನೂರೆಂಟನ್ನ ನೋಡುವಾಗ
ನಿಮ್ಮ ತಲೆಯ ವಿಚಾರಗಳು ಅನಿಸುವುದಿಲ್ಲವೇ ಹೇಳಿ.

ನಾವು ಪ್ರೇಮ ಮಾಡುವುದು ಎಲ್ಲ ಹೃದಯದಲ್ಲಿ
ಹೃದಯಪಕ್ಷಿಯಾವುದು ಎಂದರೆ ಗುಬ್ಬಿ ಅಲ್ಲವೇನರಿ
ಜಾಲೀ ಮರದ ಕಾಯಿಗಳು ಅಂದಿದ್ದು ಅವುಗಳ ದೇಹದ ಬಗ್ಗೆ
ಆದರೆ
ಗೂಡಲ್ಲಿ ಗುಬ್ಬಚ್ಚಿ ಮಟ್ಟೆಯಲ್ಲಿ ಬುಕ್ಕೇಕಾಯಿಯಂತೆ ಹುದುಗಿರತ್ತೆ
ಅಂದರೆ
ಗುಬ್ಬಿ—ಬುಕ್ಕಿ ನೋಡಿದವರಿಗೆ ಹೀಗನ್ನಿಸಬಹುದು.

ಅವುಗಳು ಇಂಥ ಪುಟ್ಟದೇಹದಲ್ಲೆ
ಕೂರುವ ಬಗ್ಗಿ
ಹೆಕ್ಕುವ ಕತ್ತೆತ್ತಿ
ನೋಡುವ ಎಡಬಲ

ಆಡುವ ಹಾರಲು
ಅನುವಾಗುವ ಅನೇಕ ಭಂಗಿಗು

ಅನೇಕ ಭಂಗಿಯು ಸರಳಹಕ್ಕಿ ಗುಬ್ಬಿಯು ಬಗ್ಗ
ತಊಕದ ಸಂಗತಿ ಸೇರಿಸೋದಾದರೆ–

ಇತರೆ ಯಾವುದೇ ಆಗಲಿ ಹಕ್ಕಿ ಎಂಬ ಹೆಸರಿಗೆ ಸಾಕಷ್ಟು ಹಗುರ
ಗುಬ್ಬಿಯಂತೂ ಹಕ್ಕಿಗಳಲ್ಲಿ 'ಹ'ದಷ್ಟೇ ಭಾರ.

—ಎಸ್. ಮಂಜುನಾಥ್

## ಮುಕ್ತಿ

ಜಡೆ ಎನ್ನುವುದು ಮಾರಾಟಕ್ಕೆ ತಕ್ಕ ವಸ್ತು
ಎನ್ನಬಹುದೇ ಅಜ್ಜಿಯರ ಮುಂದೆ?
ಕಿಡಿಕಿಡಿಯಾಗಿ ಸ್ಫೋಟಗೊಂಡಾಗ
ಗಳಿಗೆಗಳಿಗೆಯಲ್ಲೂ ಹಲ್ಲಿಲಿಬ್ಬಾಯಿಗಳು
ತೊಗಲಬಾವಲಿ ರೆಕ್ಕೆ ಬಡಿದಂತೆ ವಟಗುಟ್ಟಿ
ದಂತೆಲ್ಲ ಪಿತೃಪಿತಾಮಹರಿಗೇನು ಗತಿ?
ಎಂಬ ತಳವಿರದ ತೊಟ್ಟಿಯಲ್ಲಿ ಕಣ್ಣೀರು
ಸುರಿಸುವ ಬುದ್ಧಿಯೋಧರು ಭಾವ
ಬಾಂಧವರು ಕುಳಿತು ಕೆಣಕಲುಬಹುದೆ?
ಹೌದಜ್ಜಿ ಹೌದು ಕಲ್ಯಾಣ ಕಟ್ಟೆಯಲ್ಲಿ
ಕುಳಿತು ಕೇಶ ಮುಕ್ತರಾದಂತ ಹೆಂಗಳೆಯರ
ದುಂಡ ತಲೆಗಳಿಗೆ ಸವರಿದ ಗಂಧ ಕಾಣರೇ
ನೀವು? ಕಾಣರೇ ನೀವು? ಚನ್ನಮಲ್ಲಿಕಾರ್ಜುನನ
ಬಳಿ ಸೆರೆಗೊಡ್ಡಿದ ಅಕ್ಕನಿಗೆ ಕೇಶಾಪಕರ್ಷಣದ
ಕೃಷ್ಣೆಗೆ, ಏಕವೇಣಿ ಸೀತೆಗೆ ಮಹಾಶ್ವೇತೆಗೆ
ಕಬರಿಯೇ ಸರ್ವಸ್ವ: ಪ್ರದರ್ಶನಕ್ಕಲ್ಲ ಬಿಡಿ
ಮುಡಿ ಕಳಚಿದರೆ ಮುಕ್ತಿ ದೊರಕಬೇಡವೆ ಹೇಳಿ–
ತುಂಡು ಕೂದಲಿಗೆ ಹೆಣಿಗೆಯೂರದ ಬಯಲಿಗೆ?

—ವೇಣುಗೋಪಾಲ ಸೊರಬ

ವೇಣುಗೋಪಾಲ ಸೋರಬ, ಇಂಗ್ಲೀಷ್ ಅಧ್ಯಾಪಕ, ಕನಕಪುರ ರೂರಲ್ ಕಾಲೇಜ್,, ಬೆಂ. ಜಿಲ್ಲೆ

# ಕಸದಿಂದ ಕಲೆ: ಗುಜರಿ ಕಲೆ

—ಬಿ. ಆರ್. ವಿಜಯಕುಮಾರ್

ಅತೀಂದ್ರಿಯಂಧ್ಯಾನ ಮತ್ತು ಸ್ಟಾರ್ ವಾರ್ಸ್‌ಗಳ ಅತ್ಯಾಧುನಿಕ ಲೇಸರ್ ಆಯುಧ ವ್ಯವಸ್ಥೆಗಳ ಅತಿರೇಕ ಕಲ್ಪನಾವಿಲಾಸದ ಈ ಕಾಲದಲ್ಲಿ ಕಲೆ ಕಸವಾಗಬಹುದು, ಕಸ ಕಲೆಯಾಗಬಹುದು. ಕಸ ಕಲೆಯಾಗುವುದೆಂದರೇನು ಇದೆಂಥ ಕಸದಕಲೆ ಎಂದು ಬೆರಗಾಗ ಬೇಕಿಲ್ಲ. ಅದನ್ನು ಹೀಗೆ ವಿವರಿಸಬಹುದು.

ಕಸದಿಂದ ರಸ ಎಂಬ ಮಾತು ರೂಢಿಯಲ್ಲಿದೆ. ಹಾಗೇ ಕಸದಿಂದ ಕಲೆ, ಅಂದರೆ ಗುಜರಿ ಕಲೆ. ನಗರೀಕರಣದ ಪರಿಣಾಮವಾದ ಇಂದಿನ ಯಾಂತ್ರಿಕ ನಾಗರಿಕತೆಯಲ್ಲಿ ಬಳಸಿ ಎಸೆದ ವಸ್ತುಗಳನ್ನು ಉದ್ದೇಶ ಪೂರ್ವಕವಾಗಿ ಆರಿಸಿ, ಮತ್ತೆ ಜೋಡಿಸಿ, ಒಂದು ಹೊಸ ರೂಪ ಕೊಡುವುದು. ಯಾವುದೇ ಸಂದೇಶ, ವ್ಯಾಖ್ಯಾನವಿಲ್ಲದ ಈ ನವ್ಯ ರಚನೆಯೆ ಗುಜರಿ ಕಲೆ.

ಈ ಚಳವಳಿ ಹೊಸದೇನೂ ಅಲ್ಲ. ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಾರಂಭವಾದದ್ದು. ಈ ಶತಮಾನದ ಅರವತ್ತರ ದಶಕದಲ್ಲಿ ಪೂರ್ಣವಾಗಿ ವಿಕಾಸಗೊಂಡು ಪಕ್ವತೆಯ ಮಟ್ಟ ಮುಟ್ಟಿತೆಷ್ಟೆ. ಹತ್ತೊಂಬತ್ತನೇ ಶ. ದ ಅಂತ್ಯದಲ್ಲಿ ಸಾಂಪ್ರದಾಯಿಕ ಬಿಗಿ ಮುಷ್ಟಿಯಿಂದ ಕಲೆಯನ್ನು ಬಿಡಿಸಿ ಸದುದ್ದೇಶ ಪೂರ್ವಕವಾಗಿ ಮುಕ್ತಗೊಳಿಸಿದ ಪಾಶ್ಚಿಮಾತ್ಯ ಕಲಾವಿದರು ತಮ್ಮ ಕಲಾಭಿವ್ಯಕ್ತಿಗೆ ಹೊಸ ಮಾರ್ಗ, ಹೊಸ ವಸ್ತು ಪರಿಕರ, ಹೊಸ ಮಾಧ್ಯಮಗಳನ್ನು ಹುಡುಕ ತೊಡಗಿದರು. ಅದು ಕ್ಯೂಬಿಸ್ಟ್ ಮತ್ತು ಅಮೂರ್ತ ಕಲೆ-ಕಲಾವಿದರ ಕಾಲ. 1912-13 ರಲ್ಲಿ ಪಿಕಾಸೊ ಮತ್ತು ಬ್ರಾಕ್ ವರ್ಣ, ರೂಪ, ಗಾತ್ರ ಮತ್ತು (ತೆರವು-ಅವಕಾಶದ) ಸೌಂದರ್ಯ ಕಲ್ಪನೆಗಳನ್ನೇ ಬದಲಾಯಿಸಿದರು. ಕಲಾ ಪ್ರೇಮಿಗಳು ಅತ್ಯುತ್ಸಾಹದಿಂದಲ್ಲದಿದ್ದರೂ ಈ ಚಳುವಳಿಯನ್ನು ಸ್ವಾಗತಿಸಿದರು. ಇವಕ್ಕೆ ಮೊದಲು ಇಂಪ್ರೆಷನಿಸ್ಟ್ ಅನಂತರ ಕಾಲದ ಕಲಾವಿದರು ಶಿಲ್ಪಿಗಳು ಕಲಾರಂಗವನ್ನು ಹೊಸ ಕಲ್ಪನೆ, ಹೊಸ ಸಿದ್ಧಾಂತಗಳ

---

ಬಿ. ಆರ್. ವಿಜಯಕುಮಾರ್, ಕೇನ್ ಕಲಾಶಾಲೆ, ಶೇಷಾದ್ರಿಪುರಂ, ಬೆಂಗಳೂರು-20

ಸ್ವಾಗತಕ್ಕೆ ಹದಗೊಳಿಸಿದ್ದರು. ಪಿಕಾಸೊ ಮತ್ತು ಬ್ರಾಬ್ ಸಾಂಪ್ರದಾಯಿಕ ಪರಿಕರಗಳಾದ ಕುಂಚ ಬಣ್ಣಗಳನ್ನೇ ಬಳಸಿ, ಜೊತೆಗೆ ಹಳೆಯ ಪತ್ರಿಕೆಗಳಿಂದ ಹಸಿದ ಚೂರು ಪಾರುಗಳನ್ನು ಚಿತ್ರಗಳಿಗೆ ಅಂಟಿಸಿ ತಮ್ಮ ಕಲಾಕೃತಿಗಳನ್ನು ರಚಿಸಿದರು. ಅವುಗಳನ್ನು 'ಕೊಲಾಜ್' ಅಂದರೆ – ಸಂಲಗ್ನ - ಕಲಾರಚನೆಯೆಂದು ಕರೆದರು. ಪಿಕಾಸೊ ಇನ್ನೂ ಒಂದು ಹೆಜ್ಜೆ ಮುನ್ನಡೆದು 'ಸಿಕ್ಕವಸ್ತು'ಗಳಿಂದ ಶಿಲ್ಪರಚನೆಯ ಪ್ರಯೋಗ ಮಾಡಿದ. ಆತನ 'ಗೂಳಿಯ ಕಲೆ' – ಬೈಸಿಕಲ್‌ನ ಸೀಟ್ ಮತ್ತು ಹ್ಯಾಂಡಲ್ ಬಾರ್‌ಗಳಿಂದ ಮಾಡಿದ ಶಿಲ್ಪ ರಚನೆ - 50, 60 ರ ದಶಕಗಳ ಗುಜರಿ ಕಲಾರಚನೆಗಳಿಗೆ ನಾಂದಿಯಾಯಿತು. ಪ್ಯಾರಿಸ್‌ನಲ್ಲಿದ್ದ ರಷಿಯನ್ ಸಂಜಾತ ಕಲಾವಿದ ವ್ಲಾಡಿಮರ್ ಟಾಟ್ಲಿನ್ ಪಿಕಾಸೊವಿನಿಂದ ಸ್ಫೂರ್ತಿಗೊಂಡು ರಷ್ಯಾಕ್ಕೆ ಹಿಂದಿರುಗಿದ ನಂತರ ಒಡೆದ ಗಾಜಿನ ತುಂಡುಗಳು, ಮರದ ಚೆಕ್ಕೆ ಮತ್ತು ಕಾರ್ಡ್‌ಬೋರ್ಡ್‌ಗಳನ್ನು ಬಳಸಿ ಶಿಲ್ಪಗಳನ್ನು ರಚಿಸಿದ.

ಮಹಾಯುದ್ಧದ ನಂತರ ಕಾಲದ ಹತಾಶೆ ಹಾಗೂ ಒಂಟಿತನದ ಅನಾಥ ಭಾವನೆಗಳ ವಾತಾವರಣದಲ್ಲಿ ಫ್ರಾನ್ಸ್‌ನಲ್ಲಿ ಸೀಸರ್ ಪರಿತ್ಯಕ್ತ ವಸ್ತುಗಳ ಕಸ ಕುಪ್ಪೆಗಳಿಂದ ಆರಿಸಿತಂದ ಯಂತ್ರದ ಬಿಡಿ ಭಾಗಗಳಿಂದ ಶಿಲ್ಪಗಳ ಜೋಡಣೆಗೆ ಪ್ರಾರಂಭಿಸಿದ. ಯಂತ್ರಗಳ ಅತಿ ಬಳಕೆ ಅತಿ ಆಕ್ರಮಣದಿಂದ ಉಂಟಾದ ಹತಾಶೆಯ ಭಾವನೆಯನ್ನು ಈ ಕಲಾಕೃತಿಗಳು ಸಾರುತ್ತಿದ್ದುವು. ಕೊಳೆಯುತ್ತಿದ್ದ ನಾಗರಿಕತೆಯ ಸಂದೇಶವನ್ನು ಕಲೆಯ ಮೂಲಕ ಸಾರಿದ ಮತ್ತೊಬ್ಬ ಕಲಾವಿದ ಬ್ರಿಟನ್ನಿನ ಎಡುವರ್ಡ್ ಪಾವೊಲೊಜಿ. ಆತ ಸಾವಿರಾರು ತುಕ್ಕು ಹಿಡಿದ ನಟ್ಟು, ಬೋಲ್ಟುಗಳಿಂದ, ಕ್ಷಯಗ್ರಸ್ತ ಯಂತ್ರಗಳ ರಾಕ್ಷಸಾಕೃತಿಗಳನ್ನು ನಿರ್ಮಿಸಿದ. ಗುಜರಿ ವಸ್ತುಗಳಿಂದ ನಿರ್ಮಾಣಗೊಂಡ ಈ ಕಲೆಯ ಚಳವಳಿ ದಾದಾ, ಸರ್ರಿಯಲಿಸ್ಟ್ ಮತ್ತು ಪಾಪ್ ಚಳವಳಿಗಳ ಕಲಾವಿದರನ್ನೂ ಆಕರ್ಷಿಸಿತು. ಆದರೆ ಒಂದು ಪ್ರಮುಖ ಚಳವಳಿಯಾಗಿ, ಕಲೆಯು ಒಂದು ನವಸಿದ್ಧಾಂತವಾಗಿ 1950 ರ ದಶಕದಲ್ಲಿ ಯುರೋಪಿನಲ್ಲಿ ಪರಿಪಕ್ವತೆ ಪಡೆಯಿತು. ಅವರಲ್ಲಿ ಪೈಟರ್ಸ್ ಅತ್ಯಂತ ಶ್ರೇಷ್ಠ ಕಲಾವಿದ. ಪಾಶ್ಚಿಮಾತ್ಯದ ಪಾಪ್ ಸಂಕೇತವಾದ ಕಾರು ಮತ್ತು ಬೀರ್ ಡಬ್ಬಿಗಳು ಅನೇಕ ಕಲಾ ರಚನೆಗಳಲ್ಲಿ ಸ್ಥಾನಗಳಿಸಿದುವು. ಮತ್ತೊಂದು ಹೊಸ ಕಲಾಸಿದ್ಧಾಂತವಾದ 'ಪರಿಸರಶಿಲ್ಪ' ಗುಜರಿಕಲೆಗೆ ಇನ್ನೂ ಹೆಚ್ಚಿನ ಉತ್ಸಾಹ ತುಂಬಿತು. ಕಸ ಕುಪ್ಪೆಗಳಲ್ಲಿ ತುಕ್ಕು ಹಿಡಿಯುತ್ತ ನಾಶವಾಗುತ್ತ ಬಿದ್ದಿದ್ದ ಗುಜರಿ ವಸ್ತುಗಳು ಕ್ರೀಡಾಂಗಣ, ಸಭಾಂಗಣ, ಉದ್ಯಾನವನಗಳಲ್ಲಿ ಅಲಂಕಾರಗೊಂಡು ಲಕ್ಷಾಂತರ ಪ್ರೇಕ್ಷಕರನ್ನು ತಣಿಸುವ ಶಿಲ್ಪಗಳಾದುವು.

ಇನ್ನು ಭಾರತಕ್ಕೆ ಬಂದರೆ, ಇಲ್ಲಿಯ ಪರಿಸ್ಥಿತಿಯೇ ಬೇರೆ. ಇಲ್ಲಿ ಆಧುನಿಕ ಕಲೆಯ ಬಗ್ಗೆ ಹೇಳುವಾಗ ಎಚ್ಚರಿಕೆ ಅಗತ್ಯ. ಭಾರತ ಎಂದೂ ಪಾಶ್ಚಿಮಾತ್ಯರಿಗಿಂತ

ಎಲ್ಲ ರಂಗಗಳಲ್ಲೂ ಇಪ್ಪತ್ತು ಮೂವತ್ತು ವರ್ಷ ಹಿಂದೆಯೇ. ಭಾರತೀಯ ಕಲಾವಿದರಲ್ಲಿ ಸ್ವಂತತೆಯನ್ನು ರೂಢಿಸಿಕೊಳ್ಳುವಲ್ಲಿ ಸೆಣಸು ಹೋರಾಟ ಇದ್ದದ್ದೆ. ಈತ ಪಾಶ್ಚಿಮಾತ್ಯ ವೇಷಧರಿಸಿದ ಭಾರತೀಯ ಕಲಾವಿದನೆ, ಅಲ್ಲವೇ ? ಭಾರತೀಯತೆ, ಅವನನ್ನು ಸದಾ ಕಾಡುವ ಪ್ರಶ್ನೆಯಾಗಿದೆ. ಆ ಕಾರಣ ನಮ್ಮಲ್ಲಿ ಹೆಚ್ಚು ಹೆಚ್ಚಾಗಿ ಕೃತಿಚೌರ್ಯ ಮಾಡುವವರನ್ನೂ, ಡಂಭಕರನ್ನೂ ಕಾಣುತ್ತೇವೆ. ಅಲ್ಲದೇ, ಭಾರತೀಯ ಪರಂಪರೆ ಮತ್ತು ಮತಗಳಲ್ಲಿ ಆಳವಾಗಿ ಬೇರೂರಿರುವ ನಮ್ಮ ಸಾಂಸ್ಕೃತಿಕ ಮೌಲ್ಯಗಳ ಪ್ರಭಾವಕ್ಕೆ ನಮ್ಮ ಕಲಾಭಿಜ್ಞರು ವಶವಾಗಿದ್ದಾರೆ.

ಭಾರತದ ಶಿಕ್ಷಣ ಪದ್ಧತಿಯಲ್ಲಿ. ಕಲೆ ಮತ್ತು ಕಲಾಭಿರುಚಿ ಬೆಳವಣಿಗೆಗೆ ಅವಕಾಶವೇ ಇಲ್ಲ. ಅಂಥ ಶಿಕ್ಷಣ ನಮಗೆ ಪರಕೀಯ ತತ್ಫಲವಾಗಿ, ಕ್ಯಾಲೆಂಡರ್ ಮತ್ತು ಸಿನೆಮಾ ಪೋಸ್ಟರುಗಳನ್ನು ನೋಡಿ ಮೆಚ್ಚುವಷ್ಟಕ್ಕೇ ಸೀಮಿತವಾದ ಅಭಿರುಚಿ, ಉಳ್ಳವರಿಗೆ ಅಮೂರ್ತ ಕಲೆಯ ಬಗ್ಗೆ ಔದಾಸೀನ್ಯ, ನಿರ್ಲಕ್ಷ್ಯ. ಇವು ಮುಗ್ಧರನ್ನು ವಂಚಿಸುವ ತಂತ್ರಗಳೆಂದು ಅವರ ಭಾವನೆ. ಹಲವು ವೇಳೆ ಇಂಥ ತಂತ್ರಗಳದೆ ನಿರಂಕುಶ ದರ್ಬಾರು. ಆದ್ದರಿಂದ ಗುಜರಿ ಕಲೆಯನ್ನು ಭಾರತೀಯ ಪರಿಸ್ಥಿತಿಯ ಹಿನ್ನೆಲೆಯಲ್ಲಿ ನೋಡಬೇಕಾಗುತ್ತದೆ.

ಭಾರತದಲ್ಲಿ ಗುಜರಿ ವಸ್ತುಗಳನ್ನೂ ಮತ್ತೆ ಮತ್ತೆ ಚಲಾವಣೆಗೆ ತರಲಾಗುತ್ತದೆ. ಹಾಲಿನ ಶೀಷೆಯ ಮುಚ್ಚಳವನ್ನೂ ಇಲ್ಲಿ ಎಸೆಯುವುದಿಲ್ಲ. ಎಂಥ ಹಳೆಯ ವಸ್ತುವಾದರೂ ಅದನ್ನು ಕೊಳ್ಳುವವರಿದ್ದಾರೆ. ಭಾನುವಾರದಂದು ಗುಜರಿಗೆ ಹೋದರೆ ಮಾರಲು ಇಟ್ಟಿರುವ ಹಳೆಯ ವಸ್ತುಗಳ ವೈವಿಧ್ಯ, ಅವುಗಳ ಖರೀದಿಗಾಗಿ ನಡೆಯುವ ಚೌಕಾಸಿ ಬೆರಗುಗೊಳಿಸುತ್ತದೆ. ತುಕ್ಕು ಹಿಡಿದ ಬ್ಲೇಡುಗಳನ್ನೂ ಮಾರಾಟಕ್ಕೆ ಇಟ್ಟಿರುತ್ತಾರೆ. ಪ್ರತಿಭಾವಂತನಾದ ಕಲಾವಿದನಿಗೆ ಇಂಥಲ್ಲಿ ಕಲಾ ರಚನೆಗೆ ಬೇಕಾದ ವಸ್ತು ಪರಿಕರಗಳ ಸುಗ್ಗಿ.

ಆದರೆ ಎಂತಹ ಕಲಾ ಚಳವಳಿಗೂ ಅದು ತಳವೂರಬೇಕಾದರೆ, ಅಭಿರುಚಿಯುಳ್ಳ ರಸಿಕರು ಆವಶ್ಯಕ. ನಗರದ ಉತ್ತಮ ವರ್ಗಕ್ಕೆ ಸೇರಿದ ವಿದ್ಯಾವಂತರಾದ, ಕಲಾಭಿಮಾನಿಗಳೂ ಗುಜರಿ ಶಿಲ್ಪಗಳನ್ನು ಕಂಡಾಗ ಬೆಚ್ಚಿ ಬೀಳುತ್ತಾರೆ. ಹೀಗಾಗಿ ಭಾರತದಲ್ಲಿ ಗುಜರಿ ಕಲೆಗೆ ಬೆಲೆಯಿಲ್ಲ. ನೆಲೆಯಿಲ್ಲ. ಚಂಡಿಘಡ್‌ನ ಮುನಿಸಿಪಾಲಿಟಿಯಲ್ಲಿ ಕೆಲಸಕ್ಕಿರುವ ಚಾಂದ್, ಗುಜರಿ ವಸ್ತುಗಳಿಂದ ಸಹಜ ಸುಂದರವಾದ ಶಿಲ್ಪಗಳ ಉದ್ಯಾನವನ್ನೇ ನಿರ್ಮಿಸಿದ್ದರೂ ಆ ಬಗ್ಗೆ ಕಣ್ತೆರೆದದ್ದು ಪಾಶ್ಚಿಮಾತ್ಯ ಕಲಾವಿಮರ್ಶಕರು ಹೊಗಳಿದಾಗಲೆ. ನಮ್ಮಲ್ಲಿ ಪರಿತ್ಯಕ್ತ ವಸ್ತುಗಳಿಂದ ರಚಿಸಲಾಗುವ ಸಾಂಪ್ರದಾಯಿಕ ಶಿಲ್ಪಗಳು. ತರಕಾರಿ, ಹೂವು, ಬೊಂಬೆಗಳು ಮುಂತಾದುವು. ಕರಕುಶಲ ಕಲೆಯಾಗಿ

ಮಾತ್ರ ಉಳಿದಿವೆ. ಹೀಗಾಗಿ ಕಸದಿಂದ ನಿರ್ಮಿಸುವ ಕಲೆ, ಗುಜರಿ ಕಲೆ, ಇನ್ನೂ ಯಾರೂ ಪ್ರವೇಶಿಸದ ಹಚ್ಚ ಹಸಿರು ಭೂಮಿಯಾಗಿದೆ. ನಮ್ಮ ನಗರಗಳಲ್ಲಿ ನಾಶ ಪಡಿಸುವ ಸರಿಯಾದ ವ್ಯವಸ್ಥೆಯಿಲ್ಲದೆ ಕಳ, ರದ್ದಿ, ಗುಜರಿ ವಸ್ತುಗಳು ತುಂಬಿವೆ. ವಿನೂತನ ಕಲ್ಪನೆಗಳುಳ್ಳ ಕಲಾವಿದರಿಗೆ ಇಲ್ಲಿ ಕಸವನ್ನು ರಸವಾಗಿಸುವ ಅವಕಾಶವಿದೆ. ಕಲಾತ್ಮಕವಾದ ಅಂತಹ ಗುಜರಿ ರಚನೆಗಳನ್ನು ಚೌಕಗಳಲ್ಲಿ ಉದ್ಯಾನಗಳಲ್ಲಿ ಅಲಂಕಾರ ಶಿಲ್ಪಗಳಾಗಿ ಇಡಬಹುದು ಇದು, ಸಾರ್ವಜನಿಕರಲ್ಲಿ, ವಿವೇಚನಾಶಕ್ತಿಯುಳ್ಳ ಕಲಾಭಿಜ್ಞರಲ್ಲಿ ಗುಜರಿ ವಸ್ತುಗಳ ಬಗ್ಗೆ ಒಂದು ಹೊಸ ಜಾಗೃತಿಯನ್ನು ಮೂಡಿಸಬಹುದು. ಇಂತಹ ಹಳೆಯ ಗುಜರಿಯ ವಸ್ತುಗಳಿಗೂ ಭವಿಷ್ಯ ಇದೆ, ಅದು-ನಮ್ಮಲ್ಲಿ, ಹೊಸ ಪೀಳಿಗೆಯ ನವ ತರುಣರಲ್ಲಿ.

●

# ಒಂದು ವರದಿ

## ಸಮಾಜವಾದ : ನಿಲುವುಗಳ ಬಗ್ಗೆ ಪುನರ್ಚಿಂತನೆ

—ಎಲ್. ಎನ್. ಗೋಪಾಲ ಕೃಷ್ಣ

ಭಾರತದಲ್ಲಿ ಸಮಾಜವಾದಿ ನಿಲುವುಗಳು ತನ್ನದೇ ಆದ ವ್ಯಕ್ತಿತ್ವ ಪಡೆದು ರೂಪುಗೊಂಡಿದ್ದು 40 ಮತ್ತು 50 ರ ದಶಕಗಳಲ್ಲಿ. ಅಲ್ಲಿಂದೀಚೆಗೆ ಸಮಾಜವಾದಿಗಳು ಸಿದ್ಧಾಂತ, ನಿಲುವುಗಳ ಬಗ್ಗೆ ಮೂಲಭೂತ ಚಿಂತನೆ ನಡೆಸಿದಂತಿಲ್ಲ. ಕರ್ನಾಟಕದಲ್ಲಂತೂ ಇದು ಅಪರೂಪ. 'ಜಾತಿ'ಯನ್ನು ಕೇಂದ್ರವಾಗಿಟ್ಟುಕೊಂಡು ಬ್ರಾಹ್ಮಣ ಪ್ರಜ್ಞೆ, ಶೂದ್ರ ಪ್ರಜ್ಞೆಗಳ ಪರಿಕಲ್ಪನೆಗಳೊಂದಿಗೆ ಸಂಸ್ಕೃತಿ, ಸಾಹಿತ್ಯಕ್ಕೆ ಅನ್ವಯಿಸುವ ಪ್ರಯತ್ನವೇನೋ ನಡೆಯಿತು. ಆದರೆ ಅದನ್ನುಳಿದು ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿನ ಬದಲಾವಣೆಗಳ ಸಂದರ್ಭದಲ್ಲಿ, ಹಬ್ಬುತ್ತಿರುವ ದಲಿತ ಪ್ರಜ್ಞೆ, ಬುಲ್ಡೋಜರ್‌ನಂತೆ ಮುನ್ನುಗ್ಗುತ್ತಿರುವ ತಂತ್ರಜ್ಞಾನಕ್ರಾಂತಿ, ರೈತ ಚಳುವಳಿ, ನೈತಿಕತೆಯ

---

ಎಲ್. ಎನ್. ಗೋಪಾಲ ಕೃಷ್ಣ, ಇಂಗ್ಲೀಷ್ ಅಧ್ಯಾಪಕ, ಶೇಷಾದ್ರಿಪುರಂ ಕಿರಿಯ ಕಾಲೇಜು, ಬೆಂಗಳೂರು 20.

ಬಿಕ್ಕಟ್ಟು, ಅವಿಭಕ್ತ ಕುಟುಂಬಗಳ ಅವನತಿ, ಅರ್ಥರಹಿತ ಸಾರ್ವಜನಿಕ ಶಿಕ್ಷಣ' ಸಾಮಾಜಿಕ ಸೇವೆಗಳಲ್ಲಿನ ಅದಕ್ಷತೆ, ಸಂಕೀರ್ಣ ಜೀವನ ಕ್ರಮದ ಸಂದರ್ಭದಲ್ಲಿ ವಿಕೇಂದ್ರೀಕರಣದ ಪ್ರಕ್ರಿಯೆ – ಇಂತಹ ಹಲವಾರು ಬದಲಾವಣೆಗಳ ಸಂದರ್ಭದಲ್ಲಿ ಗಂಭೀರ ಚಿಂತನೆ ನಡೆದಂತಿಲ್ಲ. ರಾಜ್ಯದ ಸಮಾಜವಾದಿ ಮುಖಂಡರು ಸಹ ಈಗಲೂ 'ಚಲನ ರಹಿತ ವರ್ಗವೇ ಜಾತಿ, ಚಲನಶೀಲ ಜಾತಿಯೇ ವರ್ಗ' ಎಂಬ ನಿಲುವುಗಳನ್ನೇ ಪುನರುಚ್ಚರಿಸುತ್ತಾ, ಸಮಾಜಿಕ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗಮನಿಸುವ ಶಕ್ತಿಯನ್ನು ಕಳೆದುಕೊಳ್ಳುತ್ತಿದ್ದಾರೆ. ಕಾಗೋಡು, ಸೊಂಡೂರುಗಳನ್ನು ಮೆಲುಕು ಹಾಕುತ್ತಾ ನೋಸ್ಟಾಲ್ಜಿಕ್ ಆಗಿ ಜಡವಾಗುತ್ತಿದ್ದಾರೆ ಅನ್ನಿಸುತ್ತದೆ. ಜನತಾ ಪಕ್ಷದ ಸಮಾಜವಾದಿ ಸಚಿವರು, ಶಾಸಕರು, ಅಧಿಕಾರರೂಢರು ಕನಿಷ್ಟ ಒಂದು ಲಾಬಿಯಾಗಿ ವರ್ತಿಸುವಲ್ಲಿಯೂ ವಿಫಲರಾಗಿ, ಸಮಾಜವಾದಿ ಕಾರ್ಯಕ್ರಮವನ್ನು ರೂಪಿಸಿ, ಒಟ್ಟಾಗಿ ಒತ್ತಾಯಿಸುವಲ್ಲಿ ಯಾವುದೇ ವಿಫಲರಾಗಿ, ಉದಾಸೀನರಾಗಿ ಯುವ ಸಮಾಜವಾದಿಗಳನ್ನು ತೀವ್ರವಾಗಿ ನಿರಾಸೆಗೊಳಿಸುತ್ತಿದ್ದಾರೆ.

ಇಂತಹ ಅಷ್ಟೇನೂ ಹಿತಕರವಲ್ಲದ ಸನ್ನಿವೇಶದಲ್ಲಿ, ಮರುಚಿಂತನೆಯನ್ನು ಉದ್ದೀಪನಗೊಳಿಸುವ ಪ್ರಯತ್ನವಾಗಿ ಸಮಾಜವಾದಿ ಅಧ್ಯಯನ ಕೇಂದ್ರವು ಚಿಂತನ ಗೋಷ್ಠಿಯ ಸರಣಿಯೊಂದನ್ನು ನಡೆಸುವ ಆಲೋಚನೆ ಇಟ್ಟುಕೊಂಡಿದೆ. ಸರಣಿಯ ಮೊದಲಗೋಷ್ಠಿಯನ್ನು 7 ನೇ ಅಕ್ಟೋಬರ್, 1984 ರಂದು ಭಾನುವಾರ ನಡೆಸಿತು.

ಆಹ್ವಾನಿತ 40 ಜನರ ಈ ಗೋಷ್ಠಿಯಲ್ಲಿ ಚಂದ್ರಶೇಖರ ಪಾಟೀಲ್, ಕೆ. ರಾಮದಾಸ್, ಎಚ್. ಎಸ್. ದೊರೆಸ್ವಾಮಿ, ಕೆ. ಎಸ್. ನಾರಾಯಣಸ್ವಾಮಿ, ನಜೀರ್‌ಸಾಬ್, ವೈಜನಾಥಪಾಟೀಲ್, ಬಿ. ರಮೇಶ್, ಈಶ್ವರಭಟ್, ಪಾರ್ವರ್‌ಜೆ, ಶೂದ್ರ ಶ್ರೀನಿವಾಸ್, ಡಾ|| ರಾಜೀವ್, ರವೀಂದ್ರ ರೇಷ್ಮೆ, ಬಾಪು ಹೆದ್ದೂರಶೆಟ್ಟಿ, ಸರೋಜ ವೆಂಕಟ್ರಾಂ, ಲಲಿತಾರಾಜ್, ಪಟ್ಟಾಭಿರಾಮ ರೆಡ್ಡಿ ಭಾಗವಹಿಸಿದ್ದರು.

ಯಾವ ಯಾವ ವಿಷಯಗಳ ಬಗ್ಗೆ ಚಿಂತನೆ ನಡೆಸಬೇಕೆಂಬ ಬಗ್ಗೆ ಮೊದಲ ಗೋಷ್ಠಿಯಲ್ಲಿ ಚರ್ಚೆ ನಡೆಯಿತು. ಹತ್ತಾರು ವಿಷಯಗಳ ಬಗ್ಗೆ ಗೋಷ್ಠಿಯ ಗಮನ ಸೆಳೆದ ಆಹ್ವಾನಿತರು ತಾವು ಸೂಚಿಸುವ ವಿಷಯಗಳು ಏಕೆ ಪ್ರಮುಖವಾದುವುಗಳೆಂಬುದನ್ನೂ ಸಂಕ್ಷಿಪ್ತವಾಗಿ ವಿವರಿಸಿದರು.

ಎರಡನೇ ಗೋಷ್ಠಿಯಲ್ಲಿ ಎತ್ತಿಕೊಳ್ಳಲಾದ "ಆಧುನಿಕ ರಾಜ್ಯ ಲಕ್ಷಣಗಳು" (Character of Modern State) ವಿಷಯದ ಬಗ್ಗೆ ಬಿರುಸಾದ ಚರ್ಚೆ ನಡೆಯಿತು. ಮಾರ್ಕ್ಸ್‌ನ ಬೂರ್ಜ್ವಾ ರಾಜ್ಯ ವ್ಯವಸ್ಥೆಯ ಸಿದ್ಧಾಂತ ಇಂದೂ ಪ್ರಸ್ತುತವೇ ಎಂಬ ಬಗ್ಗೆ ವಿರುದ್ಧ ಅಭಿಪ್ರಾಯಗಳು ವ್ಯಕ್ತವಾದವು. ಬೂರ್ಜ್ವಾ

ಗಳು ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ನಿರ್ಮಿಸಿಕೊಂಡ ವ್ಯವಸ್ಥೆಯೇ ಈಗಿನ ರಾಜ್ಯ ವ್ಯವಸ್ಥೆ ಎಂಬುದು ಈಗಲೂ ಸೂಕ್ತವಾದ ವಿಶ್ಲೇಷಣೆ ಎಂದು ಕೆಲವರು ವಾದಿಸಿದರೆ, ನೌಕರಶಾಹಿ, ತಾಂತ್ರಜ್ಞ ವರ್ಗಗಳು ಸ್ವತಂತ್ರ ವರ್ಗಗಳಾಗಿ ಬೆಳೆದು ತಮ್ಮದೇ ಆದ ಹಿತಾಸಕ್ತಿಗಳನ್ನು ಪಡೆದಿವೆ, ಬಂಡವಾಳ ಕ್ರೋಢೀಕರಣ ಕೇವಲ ಬೂರ್ಜ್ವಾಗಳಿಂದ ಆಗುತ್ತಿಲ್ಲ, ಬಂಡವಾಳದ ಆಡಿಪಾಯ ವಿಸ್ತೃತಗೊಂಡಿದ್ದು. ರಾಜ್ಯ ಮತ್ತು ಷೇರುದಾರರಲ್ಲಿ, ಉಳಿತಾಯ ಮಾಡುವ ಎಲ್ಲಾ ವರ್ಗಗಳಲ್ಲೂ ಬಂಡವಾಳ ಹಂಚಿಕೆಯಾಗುತ್ತಿದೆ ಎಂದು ಕೆಲವರು ವಾದಿಸಿದರು. 'ಉತ್ಪಾದನಾ ಸಾಧನೆಗಳ ಒಡೆತನದ ಬದಲಾಗಿ 'ಉತ್ಪಾದನಾ ಸಾಧನಗಳ ನಿಯಂತ್ರಣ'ದ ಪರಿಕಲ್ಪನೆ ಇಂದಿಗೆ ಹೆಚ್ಚು ಪ್ರಸ್ತುತವಾಗಿದೆ. ಬೂರ್ಜ್ವಾಗಳ ಸ್ಥಾನವನ್ನು ಮ್ಯಾನೆಜೀರಿಯಲ್ ವರ್ಗ ಆಕ್ರಮಿಸುತ್ತಿದೆ ಎಂದು ಅವರುಗಳು ವಾದಿಸಿದರು. ರಾಜ್ಯಾಡಳಿತವನ್ನು ನಡೆಸುತ್ತಿರುವುದು ನೌಕರ ಶಾಹಿಯೇ ಹೊರತು ಜನರಿಂದ ಆಯ್ಕೆಯಾದ ರಾಜಕಾರಣಿಗಳಲ್ಲ ಎಂಬ ಅಭಿಪ್ರಾಯವೂ ವ್ಯಕ್ತವಾಯಿತು. ಉತ್ಪಾದನೆಯ ಲಾಭದಲ್ಲಿ ಗಮನಾರ್ಹ ಪಾಲನ್ನು ಸಂಘಟಿತ ಕಾರ್ಮಿಕರು ಪಡೆಯುತ್ತಿರುವ ಇಂದಿನ ವ್ಯವಸ್ಥೆ ಪೂರ್ಣವಾಗಿ ಬೂರ್ಜ್ವಾ ರಾಜ್ಯ ವ್ಯವಸ್ಥೆಯಾಗಿ ಉಳಿದಿಲ್ಲ, ಜನಪರ ಚಳುವಳಿಗಳು, ರೈತ ಮತ್ತು ಕಾರ್ಮಿಕ ಚಳುವಳಿಗಳು, ದಲಿತ ಚಳುವಳಿಗಳು ರಾಜ್ಯಶಕ್ತಿಯನ್ನು ತಡೆದು ನಿಲ್ಲಿಸುವ ಶಕ್ತಿಗಳಾಗಿ ಬೆಳೆದಿರುವ ಇಂದಿನ ಸಂದರ್ಭದಲ್ಲಿ ಮಾರ್ಕ್ಸ್‌ನ ಕಲ್ಪನೆಯನ್ನು ಪುನರ್ವಿಮರ್ಶಿಸಬೇಕಾಗಿದೆ ಎಂಬ ಅಭಿಪ್ರಾಯವೂ ಮೂಡಿಬಂತು.

ಸಮಾಜವಾದಿಗಳು ಮುಖಾಮುಖಿಯಾಗಿ ಚರ್ಚೆಗೆ ಒಂದೇ ವೇದಿಕೆಗೆ ಬರಲೂ ಸಾಧ್ಯವಾಗದ ಸ್ಥಿತಿಯಿದೆ ಎಂದು ಕೆ. ರಾಮದಾಸರ ಮಾತಿನ ಎಳೆಯನ್ನೇ ಹಿಡಿದು ಮಾತನಾಡಿದ ಅನೇಕರು. ಸಮಾಜವಾದಿಗಳು ವಿಶಾಲ ಮನೋಭಾವ ಬೆಳೆಸಿಕೊಳ್ಳಬೇಕೆಂದು ಒತ್ತಿ ಹೇಳಿದರು. ತಾನು ಹೇಳಿದ್ದೇ ಸಮಾಜವಾದ ಎಂಬ ನಿಲುವನ್ನು ಬಿಟ್ಟು, ಬೇರೆಯವರು ಹೇಳಿದ್ದನ್ನೂ ಗೌರವಿಸುವ ಪರಿಪಾಠ ಬೆಳೆಸಿಕೊಳ್ಳಬೇಕೆಂದು ಆಹ್ವಾನಿತರಲ್ಲಿ ಹಲವರು ಹೇಳಿದರು. ಜಾತಿ ಸಮ್ಮೇಳನದಲ್ಲಿ ಭಾಗವಹಿಸುವ ಸಮಾಜವಾದಿಗಳು ಮಾಡುವಷ್ಟು ತಪ್ಪನ್ನೇ, ದೊಡ್ಡ ಹೋಟೆಲ್‌ಗಳಲ್ಲಿ ವಿಸ್ಕಿ ಕುಡಿಯುವ, ಟೆರಿಕಾಟ್ ಪ್ಯಾಂಟ್ ಧರಿಸುವ, ಬೆಲೆಬಾಳುವ ಮನೆಗಳಲ್ಲಿ ವಾಸಿಸುವ ಸಮಾಜವಾದಿಗಳು ಮಾಡುತ್ತಿದ್ದಾರೆಂಬುದನ್ನು ಎಲ್ಲ ಸಮಾಜವಾದಿಗಳೂ ಗುರುತಿಸಿದರೆ ವಿಶಾಲ ಮನೋಭಾವನೆ ಬರಲು ಸಾಧ್ಯ ಎಂಬ ಅಭಿಪ್ರಾಯವೂ ವ್ಯಕ್ತವಾಯಿತು. ಜಾತಿಯ ಬಗ್ಗೆ ಇರುವ ನಿಲುವಿನಷ್ಟೇ ತಂತ್ರಜ್ಞಾನದ ಬಗ್ಗೆ, ಬಡವ-ಶ್ರೀಮಂತ ಅಸಮಾನತೆಯ ಬಗ್ಗೆ, ಇರುವ ನಿಲುವುಗಳೂ ಮುಖ್ಯ ಎಂಬ ಕಳಕಳಿ ಈ ವಾದಗಳ ಹಿಂದೆ ಇತ್ತು. ರಾಜಕೀಯವಾಗಿ ಸಮಾಜವಾದಿಗಳ ವಿಶಿಷ್ಟತೆ (Identity of Socialists)

ಹೇಗೆ ಪರಿಸ್ಥಿತಿಯು ತೀವ್ರ ಒತ್ತಡಗಳಿಂದಾಗಿ ಬಿಕ್ಕಟ್ಟಿನಿಂದ ಬಿಕ್ಕಟ್ಟಿಗೆ ಸಾಗುತ್ತಿದೆ ಎಂಬುದೂ ಚರ್ಚೆಗೆ ಒಳಗಾಯಿತು.

ಆರ್ಥಿಕ ಕ್ಷೇತ್ರದ ಬಗ್ಗೆ ಪ್ರಾರಂಭವಾದ ಮೂರನೇ ಗೋಷ್ಠಿ ಅನಿವಾರ್ಯವಾಗಿ ರೈತ ಚಳುವಳಿಯ ಕಡೆ ತಿರುಗಿತು. ಚಳುವಳಿಯು ನಗರದ ಬೂರ್ಜ್ವಾ ಮತ್ತು ಅಧಿಕಾರಶಾಹಿಗೆ ಕ್ರಾಂತಿಕಾರಿ ಛಾಲೆಂಜ್ ಆಗಿ ರೂಪುಗೊಂಡಿರುವುದನ್ನು ಎಲ್ಲರೂ ಶ್ಲಾಘಿಸಿದರೂ, ರೈತವರ್ಗಕ್ಕೆ ವಿರುದ್ಧವಾಗಿ ಭೂಹೀನ ಕಾರ್ಮಿಕ ವರ್ಗ ಮೇಲೇಳುತ್ತಿರುವುದನ್ನೂ ಸಭೆ ಗಮನಿಸಿತು. ಎರಡೂ ವರ್ಗಗಳೂ ಆಂತರಿಕವಾಗಿಯೇ ಪರಸ್ಪರ ವಿರೋಧಿ ವರ್ಗಗಳು. ಕಟ್ಟಕಡೆಗೆ ಸಮಾಜವಾದಿಗಳು ಭೂಹೀನ ಕಾರ್ಮಿಕ ವರ್ಗದ ಪರವಾಗಿ ನಿಲ್ಲಬೇಕೆಂಬುದು ಸಭೆಯ ಒಟ್ಟಭಿಪ್ರಾಯವಾಗಿತ್ತು. ಈಗ ಇನ್ನೂ ಸ್ಪಷ್ಟವಾಗಿ ಈ ಎರಡೂ ವರ್ಗಗಳು ರೂಪುಗೊಂಡಿಲ್ಲ ಎಂದು ಸಭೆ ಅಭಿಪ್ರಾಯ ಪಟ್ಟಿತು.

ಇತ್ತೀಚೆಗೆ ವಿಚಾರಗೋಷ್ಠಿಗಳೆಲ್ಲಾ ಭಾಷಣಗೋಷ್ಠಿಗಳಾಗಿರುತ್ತಿರುವ ಸನ್ನಿವೇಶದಲ್ಲಿ, ದುಂಡು ಮೇಜಿನ ಚಿಂತನಗೋಷ್ಠಿ ಏರ್ಪಡಿಸಿ, ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದವರು ಚರ್ಚೆಯಲ್ಲಿ ಸಕ್ರಿಯವಾಗಿದ್ದುದು, ಮುಖಾಮುಖಿಯಾಗಿ ಚರ್ಚಿಸಲು ಸಾಧ್ಯವಾದದು ಕಾರ್ಯಕ್ರಮದ ವಿಶೇಷವಾಗಿತ್ತು.

ಇತ್ತೀಚಿನ ದಿನಗಳಲ್ಲಿ ಚಿಂತನ ಕ್ಷೇತ್ರದಲ್ಲಿ ಸಮಾಜವಾದಿಗಳು ಉಳಿದ ಎಡವಾದಿಗಳಿಗಿಂತ ಹಿಂದೆ ಬಿದ್ದಿದ್ದಾರೆಂಬ ಭಾವನೆಯನ್ನು ಹೋಗಲಾಡಿಸುವ ಕಳಕಳಿ ಈ ಪ್ರಯತ್ನದ ಹಿಂದಿತ್ತು.

●

# ಒಳನೋಟ

ಪ್ರಿಯ ಶೂದ್ರ,

ನಿಮ್ಮ ಸಂದರ್ಭದಲ್ಲಿ ಸಾಹಿತ್ಯ ಮತ್ತು ಕಲೆಯ ಬಗ್ಗೆ ಚೆನ್ನಾಗಿ ತಿಳಿದುಕೊಂಡಿರುವ ನರಸಿಂಹ ಸ್ವಾಮಿಯವರು ನನ್ನ ಚಿತ್ರ 'ರೂಪಾಂತರ'ದ ಬಗೆಗೆ ಆಗಸ್ಟ್ ತಿಂಗಳ ಸಂಚಿಕೆಯಲ್ಲಿ ಬರೆದ ಪತ್ರಕ್ಕೆ ವಿಷಾದ ವ್ಯಕ್ತಪಡಿಸುತ್ತೇನೆ. "ಮೋನಾಲಿಸಾಳ" ರೂಪಾಂತರವನ್ನು ಈ ರೀತಿ ಬೇರೆ ದೇಶದಲ್ಲೇನಾದರೂ ಮಾಡಿದ್ದರೆ, ತಕ್ಷಣ ಅಂತಹವರನ್ನು ಪ್ರಾಸಿಕ್ಯೂಟ್ ಮಾಡುತ್ತಿದ್ದರು" ಎನ್ನುವ ಅವರ ಹೇಳಿಕೆ ನನಗೆ ಬಾಲಿಶವಾಗಿ ಕಾಣುತ್ತದೆ. ಏಕೆಂದರೆ ವಿದೇಶಗಳಲ್ಲಿ ಮೋನಾಲಿಸಾದಷ್ಟು distort ಮಾಡಲ್ಪಟ್ಟ ಕೃತಿ ಬೇರಾವುದೂ ಇಲ್ಲ, ಕಲಾವಿದರು ತಮ್ಮ ಮನಸ್ಸಿಗೆ ತೋಚಿದ್ದನ್ನೆಲ್ಲ ಆ ಕೃತಿಗೆ ಮಾಡಿದ್ದಾರೆ ; ವಿಕೃತಗೊಳಿಸಿದ್ದಾರೆ.

ಕಲಾ ಚರಿತ್ರೆಯಲ್ಲಿ ಪ್ರಮುಖವಾಗಿರುವ ಡಾಡಾಯಿಸಂ ಪಂಥದ ನೇತಾರ ಮಾರ್ಸೆಲ್ ಡ್ಯೂಶಾಂಪ್ 1919 ರಲ್ಲಿ ಮೋನಾಲಿಸಾಕ್ಕೆ ಮೀಸೆ ಬರೆದು ಅಶ್ಲೀಲ ಶೀರ್ಷಿಕೆ ಕೊಟ್ಟಾಗಲೂ ಅವನನ್ನು ಪ್ರಾಸಿಕ್ಯೂಟ್ ಮಾಡದೇ ಅದನ್ನು ಗಮನಾರ್ಹ ಘಟನೆಯಾಗಿ ಪರಿಗಣಿಸಿದ್ದಾರೆ. Art Direction ಪತ್ರಿಕೆಯ 1977 ರ ನವೆಂಬರ್ ಸಂಚಿಕೆಯಲ್ಲಿ ಮುಖಪುಟದಲ್ಲಿ ಮೋನಾಲಿಸಾಳನ್ನು ಷೇಕ್ಸ್‌ಪಿಯರನಿಗೆ ಕೊಟ್ಟು ಮದುವೆ ಮಾಡಿದ್ದಾರೆ. ಇಷ್ಟು ಮಾತ್ರವಲ್ಲ, ಸಾಹಿತ್ಯದಲ್ಲಿ, ಜಾಹಿರಾತಿನ ಕ್ಷೇತ್ರದಲ್ಲಿ ಮೋನಾಲಿಸಾಳನ್ನು ವಿಭಿನ್ನ ದೃಷ್ಟಿಯಿಂದ ನೋಡಿರುವ ನೂರಾರು ಉದಾಹರಣೆಗಳುಂಟು. ಹೀಗಿರುವಾಗ ಈ ಯಾವ ಕಲಾವಿದರನ್ನೂ, ಜಾಹಿರಾತುದಾರರನ್ನೂ, ಸಾಹಿತಿಗಳನ್ನೂ ಪ್ರಾಸಿಕ್ಯೂಟ್ ಮಾಡಿದ ಸಂಗತಿ ನನಗಂತೂ ತಿಳಿದಿಲ್ಲ. ಅದಿರಲಿ, ಮೊನ್ನೆ ದೆಹಲಿಯಿಂದ ಬಂದಿದ್ದ ಕಲಾವಿದ ಸುಬ್ಬಣ್ಣ ಇನ್ನೊಂದು ಸಂಗತಿ ಹೇಳಿದರು. ಅಲ್ಲಿ ಇತ್ತೀಚೆಗೆ ನಡೆದ ಕಲಾ ಪ್ರದರ್ಶನವೊಂದರಲ್ಲಿ ಮೋನಾಲಿಸಾಳನ್ನು ಸೆರೆಯಲ್ಲಿ ಬಂಧಿಸಿಟ್ಟ ಚಿತ್ರವೊಂದಿತ್ತಂತೆ.

ಕಲಾಕೃತಿಗಳು ಬೇರೆ ಬೇರೆಯ ಸಂದರ್ಭಗಳಲ್ಲಿ ಬೇರೆ ಬೇರೆಯ ಧೋರಣೆಗಳಿಂದ ಸೃಷ್ಟಿಯಾಗುತ್ತದೆ. ಎಲ್ಲ ಕೃತಿಗಳನ್ನೂ ಒಂದೇ ಧೋರಣೆಯಿಂದ ನೋಡುವುದು ಒಳ್ಳೆಯ ಸಹೃದಯನ ಲಕ್ಷಣವಲ್ಲ. ಕೆಲವು ಸಂಗತಿಗಳು ಸಾಮಾನ್ಯ

ಪ್ರೇಕ್ಷಕರ ಪಾಲಿಗೆ ಹೊಳೆಯುವುದಿಲ್ಲ. 16ನೆಯ ಶತಮಾನದಲ್ಲಿ ರಚಿತವಾದ ಮೋನಾಲೀಸಾಳನ್ನು ಇಂದು ಅದೇ ದೃಷ್ಟಿಯಿಂದ, ಅದೇ ಧೋರಣೆಯಿಂದ ನೋಡಲೇ ಬೇಕಾಗಿಲ್ಲ. ಅಂತೆಯೇ ಕಲಾವಿದರು ಅದನ್ನು ವಿಭಿನ್ನ ದೋರಣೆಗಳಿಂದ ನೋಡುವುದು ಸಹಜ.

ನಾನು ನನ್ನ 'ರೂಪಾಂತರ ಸರಣಿ' ಯನ್ನು ಪ್ರದರ್ಶಿದ್ದಾಗಲೇ ಈ ಸರಣಿಯನ್ನು ಕುರಿತು ನನ್ನ ಧೋರಣೆಯನ್ನು ಸ್ಪಷ್ಟಪಡಿಸಿದ್ದೆ. "ನಮ್ಮ ಸುತ್ತಲಿನ ಜಗತ್ತು ರೂಪಾಂತರ ಹೊಂದುತ್ತಿದೆ. ಒಂದು ಕಾಲಕ್ಕೆ ಅಸಹನೀಯವಾಗಿದ್ದ ರಾಜಕೀಯ ಹಾಗೂ ಸಾಮಾಜಿಕವಾದ ಅನೇಕ ಸಂಗತಿಗಳು ಇಂದು ನಮಗೆ ಸಹ್ಯವಾಗುತ್ತಿವೆ. ಅನ್ಯಾಯ, ಅತ್ಯಾಚಾರ, ಆಷಾಢಭೂತಿತನ, ಭ್ರಷ್ಟಾಚಾರ, ದುಃಖ, ನೋವು ಇತ್ಯಾದಿಗಳೆಲ್ಲ ಕೆಟ್ಟದ್ದಲ್ಲದ ಸ್ವಾಭಾವಿಕ ಘಟನೆಗಳೆನಿಸುತ್ತಿವೆ. ಈ ಮೃಗೀಯ ಭಾವನೆಗಳನ್ನೆಲ್ಲ ನಗುಮೊಗದಿಂದ ಸ್ವೀಕರಿಸುವ ಮನೋಭಾವ ನಮ್ಮದಾಗುತ್ತಿದೆ. ನಮ್ಮ ಇಂದ್ರಿಯಗಳು ಕೂಡಾ ತಮ್ಮ ಸೂಕ್ಷ್ಮತೆಯನ್ನು ಕಳೆದುಕೊಳ್ಳುತ್ತಿವೆ. ಈ ರಪಾಂತರದ ಪ್ರಕ್ರಿಯೆಯಲ್ಲಿ ನಾವೆಲ್ಲ ಭಾಗಿಗಳು. ನೀವು ಕೂಡಾ.... ...." ಎನ್ನುವುದು ನನ್ನ ಅನಿಸಿಕೆ. ಇಷ್ಟು ಮಾತ್ರ ಹೇಳಿ ಕೃತಿಯ ಮೌಲ್ಯದ ಬಗೆಗೆ ಓದುಗರೇ ನಿರ್ಧರಿಸುವುದು ಒಳಿತೆಂದು ಭಾವಿಸುವೆ.

ಸ್ವಾಮಿಯವರು ನನ್ನ ಕೃತಿಯ ಬಗೆಗೆ ಬರೆಯುವಾಗ "ಇದರಲ್ಲಿ ಕುಂಚದ ಕೈವಾಡ ಎಳ್ಳಷ್ಟೂ ಇಲ್ಲ ಎಂದು ನಿರಕ್ಷರ ಕುಕ್ಷಿ ಕೂಡಾ ಹೇಳಬಲ್ಲ" ಎಂದಿದ್ದಾರೆ. ಈ ಕೃತಿಯಲ್ಲಿ ಮೋನಾಲಿಸಾಳ ವಿಕೃತ ಮುಖವನ್ನು ಕುಂಚ ಮತ್ತು ವರ್ಣಗಳಿಂದಲೇ ಸೃಷ್ಟಿಸಿದ್ದೇನೆ. ಸಾಹಿತ್ಯ ಮತ್ತು ಕಲೆಯನ್ನು ಚೆನ್ನಾಗಿ ತಿಳಿದುಕೊಂಡಿರುವ ಸ್ವಾಮಿಯವರಿಗೆ ಇದು ಕೂಡಾ ತಿಳಿಯಲಿಲ್ಲವೇ ? ಪ್ರಾಯಃ ಕೇವಲ ಮುದ್ರಿತ ಚಿತ್ರವನ್ನು ನೋಡಿಯೇ ಅವರು ಎಲ್ಲವನ್ನು ತೀರ್ಮಾನಿಸಿದ್ದಾರೆಂದು ಕಾಣುತ್ತದೆ.

ಈ ಕೃತಿಯ ಕುರಿತು ನಿಮಗೆ ಬಂದಿರುವ ಪತ್ರಗಳು ಹೇಗಿವೆಯೋ ನನಗೆ ಗೊತ್ತಿಲ್ಲ. ಆದರೆ ನನಗಂತೂ ಅನೇಕ ಸಾಹಿತಿಗಳು, ಕಲಾವಿದರು ಈ ಕೃತಿಯನ್ನು ಕುರಿತು ಮೆಚ್ಚುಗೆ ತಿಳಿಸಿದ್ದಾರೆ. ಹೊಸ ದೃಷ್ಟಿಕೋನದಿಂದ ಕಲಾಕೃತಿಯೊಂದರ ರಚನೆಯಾದಾಗ ಆ ಕುರಿತು ಮಿಶ್ರ ಪ್ರತಿಕ್ರಿಯೆ ಬರುವುದು ಸಹಜ. ಕೊನೆಯಲ್ಲಿ ಮೋನಾಲಿಸಾಳ ಚಿತ್ರ ನೋಡಿದಾಗಲೆಲ್ಲ ನೀವು ಅಪರಾಧಿಯಂತೆ ನಿಲ್ಲಬೇಕಾದ ಪರಿಸ್ಥಿತಿ ಬಂದುದಕ್ಕೆ ವಿಷಾದಿಸುತ್ತ ಪತ್ರ ಮುಗಿಸುತ್ತೇನೆ.

**ಚಿ. ಸು. ಕೃಷ್ಣಸೆಟ್ಟಿ**
ಬೆಂಗಳೂರು.

# ಶ್ರೀರಂಗ

ತಮ್ಮ ಸಾವಿನ ಕೊನೆಯ ಕಾಲದವರೆವಿಗೂ ಲವಲವಿಕೆಯಿಂದ ಬದುಕಿ ತಮ್ಮ ಎಂಬತ್ತನೆಯ ವಯಸ್ಸಿನಲ್ಲಿ ನಿಧನರಾದ ಶ್ರೀರಂಗರು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಕೆಲವೇ ಅಪರೂಪದ ವ್ಯಕ್ತಿಗಳಲ್ಲಿ ಒಬ್ಬರು. ಕುವೆಂಪು ಮತ್ತು ಕಾರಂತರಂತೆ ತಮ್ಮ ಕ್ರಿಯಾಶೀಲ ಸಾಹಿತ್ಯದ ಜೊತೆಗೆ ವಿಚಾರಶೀಲತೆಯನ್ನು ಬೆಳೆಸಿದ ಅತ್ಯಂತ ಹಿರಿಯ ಸಾಹಿತಿ ಶ್ರೀರಂಗ. ಅಷ್ಟೇ ಕಟ್ಟುನಿಟ್ಟಾಗಿ ಬದುಕಿದ ವ್ಯಕ್ತಿ. ಯಾವುದೇ ಅರ್ಥಪೂರ್ಣ ಚಳುವಳಿಯಾಗಲಿ ಅದರಲ್ಲಿ ಪಾಲ್ಗೊಂಡು ತಮ್ಮ ಸಮಕಾಲೀನರಲ್ಲಿ ಚೈತನ್ಯದ ಶಕ್ತಿಯನ್ನು ತುಂಬುತ್ತಿದ್ದವರು.

ಕೈಲಾಸಂರವರ ನಂತರ ರಂಗಭೂಮಿಗೆ ಶ್ರೀರಂಗರ ಕೊಡುಗೆ ಅಪಾರ. ಆದರೆ ಶ್ರೀರಂಗರು ಬರೀ ನಾಟಕಕಾರರಾಗಿ ಮಾತ್ರ ಉಳಿದಿರಲಿಲ್ಲ. ಕಾದಂಬರಿಕಾರರಾಗಿದ್ದರು. ವಿಚಾರಶೀಲ ಸಾಹಿತಿಯಾಗಿದ್ದರು. ಇಂಥ ಜೀವಂತ ವ್ಯಕ್ತಿಯನ್ನು ನಮ್ಮ ಸಾಂಸ್ಕೃತಿಕ ಕ್ಷೇತ್ರ ಕಳೆದುಕೊಂಡಿದ್ದಕ್ಕೆ ಶೂದ್ರ ತನ್ನ ಅತೀವ ಸಂತಾಪವನ್ನು ಸೂಚಿಸುತ್ತೆ. ಶ್ರೀರಂಗರು 1976ರ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಶೂದ್ರ ನಡೆಸಿದ 'ಸಾಹಿತ್ಯ ಮತ್ತು ಕ್ರಿಯಾಶೀಲತೆ' ಯ ವಿಚಾರಗೋಷ್ಠಿಯಲ್ಲಿ ಒಂದು ಗೋಷ್ಠಿಯ ಅಧ್ಯಕ್ಷತೆ ವಹಿಸಿ, ತುಂಬ ಸಂತೋಷದಿಂದ ನಡೆಸಿಕೊಟ್ಟಿದ್ದರು. ಶೂದ್ರ ಮತ್ತೊಮ್ಮೆ ಇದಕ್ಕಾಗಿ ಶ್ರೀರಂಗರನ್ನು ಸ್ಮರಿಸುತ್ತೆ.

ಸಂ.

# ಹತ್ತಿ, ಉಣ್ಣೆ ಮತ್ತು ರೇಷ್ಮೆ ನೇಕಾರರಿಗೆ ಸಹಾಯ ಸೌಲಭ್ಯಗಳು

ನಮ್ಮ ನಾಡಿನ ಅರ್ಥವ್ಯವಸ್ಥೆಯಲ್ಲಿ ಕೃಷಿಯ ನಂತರ ನೇಕಾರರಿಗೆ ವಿಶೇಷ ಸ್ಥಾನ. ನಿರುದ್ಯೋಗ ನಿವಾರಣೆಯಲ್ಲಿ ಅದರ ಪಾತ್ರ ಗಣನೀಯ.

ಕೈಮಗ್ಗ ನೇಕಾರ ಸಂಘಗಳಿಗೆ ಷೇರುಧನ ಹಾಗೂ ಸದಸ್ಯರ ಸಂಖ್ಯೆಗೆ ಅನುಗುಣವಾಗಿ 5,000ರೂ.ಗಳಿಂದ 50,000 ರೂ.ವರೆಗೆ ಆರ್ಥಿಕ ಸಹಾಯ ನೀಡಲಾಗುತ್ತಿದೆ.

ಹತ್ತಿ, ಉಣ್ಣೆ ಮತ್ತು ರೇಷ್ಮೆ ನೇಕಾರ ಉದ್ಯಮಿಗಳಿಗೆ ನೇಕಾರ ಸಂಘಗಳಿದ್ದು ಅವು ನೇಯ್ಗೆ ವಸ್ತುಗಳ ಸಂಗ್ರಹಣೆ ಮತ್ತು ಮಾರಾಟ ವ್ಯವಸ್ಥೆ ಮಾಡುತ್ತಿವೆ.

ಏಳನೇ ತರಗತಿಯವರೆಗೂ ಶಿಕ್ಷಣ ಪಡೆದಿರುವ ನೇಕಾರರಿಗೆ ನೇಯ್ಗೆ ಹಾಗೂ ವಿನ್ಯಾಸದಲ್ಲಿ ತರಬೇತಿ ನೀಡಲಾಗುವುದು, ತರಬೇತಿ ವೇಳೆಯಲ್ಲಿ ಪ್ರತಿ ತಿಂಗಳು 200 ರೂ. ಶಿಷ್ಯವೇತನವನ್ನು ಕೊಡಲಾಗುತ್ತಿದೆ.

ಎಸ್.ಎಸ್.ಎಲ್.ಸಿ. ವರೆಗೆ ಅಭ್ಯಸಿಸಿರುವ ನೇಕಾರರಿಗೆ ವಿಶೇಷ ತಾಂತ್ರಿಕ ಜ್ಞಾನ ನೀಡಲು ಮೂರು ವರ್ಷಗಳ ತರಬೇತಿ ವ್ಯವಸ್ಥೆ ಮಾಡಲಾಗುತ್ತಿದೆ. ಈ ತರಬೇತಿ ಅವಧಿಯಲ್ಲಿ ಪ್ರಥಮ ವರ್ಷ 150 ರೂ. ದ್ವಿತೀಯ ವರ್ಷ 175 ರೂ. ಹಾಗೂ ತೃತೀಯ ವರ್ಷ 200 ರೂ. ಮಾಸಿಕ ವೇತನ ನೀಡಲಾಗುತ್ತಿದೆ.

ಹತ್ತಿ ಕೈಮಗ್ಗ ಅಭಿವೃದ್ಧಿಗಾಗಿ 6 ಕೋಟಿ ರೂ. ವೆಚ್ಚದ ಮೂರು ಹೊಸ ಯೋಜನೆಗಳನ್ನು, ಉಣ್ಣೆ ನೇಕಾರರ ಏಳಿಗೆಗಾಗಿ 1.50 ವೆಚ್ಚದ ತೀವ್ರ ಅಭಿವೃದ್ಧಿ ಯೋಜನೆಯನ್ನು ಕೈಗೊಳ್ಳಲಾಗಿದೆ.

ಕೈಮಗ್ಗ ಅಥವಾ ವಿದ್ಯುತ್ ಚಾಲಿತ ಯಂತ್ರದಿಂದ ಬಟ್ಟೆಯನ್ನು ತಯಾರಿಸಿದ ನೇಕಾರರೇ ಸ್ವತಃ ಮಾರಾಟ ಮಾಡಬೇಕಾದಲ್ಲಿ, ಮೂಲತೆರಿಗೆ ಮತ್ತು ಸರ್‌ಚಾರ್ಜ್‌ಗಳಿಂದ ಪೂರ್ಣ ವಿನಾಯಿತಿ ಇದೆ.

ಪ್ರಕಟಣೆ :— ವಾರ್ತಾ ಮತ್ತು ಪ್ರಚಾರ ಇಲಾಖೆ
ಕರ್ನಾಟಕ ಸರ್ಕಾರ, ಬೆಂಗಳೂರು.

## ಸಾದರ ಸ್ವೀಕಾರ:

**The Still Small Voice** (Poems)

*—S. Balu Rao*

'Kaveri', 131, J- Extn. Lakshminagar, Delhi-110 093
Price: Rs. 25 & Rs. 15

ಒಡಲುರಿ (ಕಥಾಸಂಕಲನ) ಕಥಾ ಚಿಕ್ಕಣ್ಣ, ನೆಲ್ಮೆ ಪ್ರಕಾಶನ, ವಿಜಯನಗರ,
ಬೆಂಗಳೂರು–560 040 ಬೆಲೆ: **10**ರೂ.

ಸಂಕಲ್ಪಗಳು (ಪ್ರಬಂಧ ಸಂಗ್ರಹ)–ಅ.ರಾ. ಮಿತ್ರ, ಅಭಿರುಚಿ ಪ್ರಕಾಶನ, ಬೆಂಗಳೂರು

F/NP/KRNU/72 No. M (2) PRB 211/73-74

Shoodra Kannada Monthly

ಡಿಸೆಂಬರ್ ಸಂಚಿಕೆಯಲ್ಲಿ :

ಡಾ|| ಬಿ. ಕೃಷ್ಣಮೂರ್ತಿ—ಬಿದಿರಹಳ್ಳಿ ನರಸಿಂಹಮೂರ್ತಿ—ಇಂದುವದನೆ--ವಿ. ಚಿಕ್ಕವೀರಯ್ಯ--ವಿ. ಆರ್. ಪ್ರತಿಭಾ--ಬಿ. ಆರ್. ವಿಜಯಕುಮಾರ್--ಆನಂದ ಮೂರ್ತಿ -- ಎಲ್ಸಿನಾಗರಾಜ್ -- ಬಿ. ಎಸ್. ಚಂದ್ರಶೇಖರ್--ತಿಪ್ಪೇಸ್ವಾಮಿ -- ಕನಸಿಗೊಂದು ಕಣ್ಣು.



ಕಲೆ : ಪುಷ್ಪಮಾಲಾ

Printed at : Shalivahan Printers, Bangalore-53 Editor & Publisher
M. SRINIVAS